ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

**ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.**

**ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.**

**ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.**

**ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.**

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

**ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.**

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.

Printed at Offset Dept., T. T. D. Press, Tirupati.



ಭಕುತ ಜನ ಮುಂದೆ ನೀನವರ ಹಿಂದೆ
ಯುಕುತಿ ಕೈಗೊಳ್ಳದು ಗಯಾ ಗದಾಧರನೆ ॥ ಪ ॥

ತಟ್ಟಿರಡು ಬಿಗಿದು ನದಿ ಸೂಸಿ ಪರಿವೃತ ಬರಲು
ಕಟ್ಟಲೆಯಿಂದ ಹರಿಗೋಲು ಹಾಕಿ
ನೆಟ್ಟನೆ ಆಚೀಚೆಗೆ ಪೋಗಿ ಬರುವಾಗ
ಹುಟ್ಟು, ಮುಂದಲ್ಲದೆ ಹರಿಗೋಲು ಮುಂದೇ ? ॥ ೧ ॥

ಕಾಳೆ, ಹೆಗ್ಗಾಳೆ, ದುಂದುಭಿ, ಭೇರಿ, ತಮಟೆ, ನಿ
ಸ್ಸಾಳೆ, ನಾನಾ ವಾದ್ಯ ಭೂಷಣಗಳು
ಸಾಲಾಗಿ ಬಳಿವಿಡಿದು ಸಂಭ್ರಮದಿ ಬರುವಾಗ
ಆಳು ಮುಂದಲ್ಲದೆ ಅರಸು ತಾ ಮುಂದೇ ? ॥ ೨ ॥

ಉತ್ಸವ ವಾಹನ ಬೀದಿಲಿ ಮೆರೆಯುತ ಬರಲು
ಸತ್ಸಂಗತಿಗೆ ಹರಿದಾಸರಲ್ಲದೆ
ವತ್ಸ ಸಿರಿ ವಿಜಯ ವಿಠಲ ವೆಂಟಾಚಲ
ವತ್ಸ ಮುಂದಲ್ಲದೆ ಧೇನು ತಾ ಮುಂದೇ ? ॥ ೩ ॥

( ತಿರುಮಲೆಯ ಬ್ರಹ್ಮೋತ್ಸವದ ರಥೋತ್ಸವದಲ್ಲಿ ಶ್ರೀ ವಿಜಯ ದಾಸರು ಹಾಡಿದ ಕೀರ್ತನೆ. )




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೩] ಅಕ್ಟೋಬರ್ ೧೯೮೨ [ಸಂಚಿಕೆ ೫


# ವಿಷಯಸೂಚಿ

# ಶ್ರೀ ವರಾಹಸ್ವಾಮಿ ದೇವಾಲಯ ಜೀರ್ಣೋದ್ಧಾರ

ತಿರುಮಲೆಯ ಶ್ರೀ ವರಾಹಸ್ವಾಮಿ ದೇವಾಲಯದ ಜೀರ್ಣೋದ್ಧಾರ ಕಾರ್ಯ ಪೂರ್ತಿಯಾಗಿದ್ದು, ದೇವಾಲಯದ ಸೌಂದರ್ಯ, ಪ್ರಶಾಂತ ವಾತಾವರಣ ಮತ್ತಷ್ಟು ಹೆಚ್ಚು ಶೋಭಾಯಮಾನವಾಗಿವೆ.

ಜೀರ್ಣೋದ್ಧಾರದ ಸಂಬಂಧದಲ್ಲಿ ಶ್ರೀ ವರಾಹಸ್ವಾಮಿ ದೇವಾಲಯದಲ್ಲಿ ಬಾಲಾಲಯವನ್ನು 1982 ಏಪ್ರಿಲ್ 26 ರಂದು ನಿರ್ಮಿಸಿ ತತ್ಸಂಬಂಧವಾದ ಮಹಾಸಂಪ್ರೋಕ್ಷಣೆಯನ್ನು ಜುಲೈ 20 ರಂದು ಅಂಕುರಾರ್ಪಣೆ ಮಾಡಿ ಜುಲೈ 21 ರಿಂದ ಐದುದಿನಗಳ ಕಾಲ ನಡೆಸಲಾಯಿತು. ಮಹಾಸಂಪ್ರೋಕ್ಷಣೆಯ ಕಾಲದಲ್ಲೇ ಶ್ರೀ ವರಾಹಸ್ವಾಮಿಯವರ ಮೂಲ ವಿಗ್ರಹವನ್ನು ಭೂಮಟ್ಟದಿಂದ ಒಂದು ಅಡಿ ಎತ್ತರಕ್ಕೇರಿಸಿ, ಚಿನ್ನದ ಮಕರ ತೋರಣವನ್ನು ಕಟ್ಟಲಾಗಿದ್ದು, ಯಾತ್ರಿಕರಿಗೆ ಮೂಲ ವಿಗ್ರಹದ ಹೆಚ್ಚು ಚೆನ್ನಾದ ದರ್ಶನ ಉಂಟಾಗುವಂತೆ ಮಾಡಲಾಗಿದೆ. ಮಹಾಸಂಪ್ರೋಕ್ಷಣೆಯೊಂದಿಗೆ ಸೇರಿ ಬರುವಂತೆ 48 ದಿನಗಳ ಮಂಡಲಾಭಿಷೇಕವನ್ನು ಜುಲೈ 26 ರಿಂದ ಆರಂಭಿಸಿ ಸೆಪ್ಟಂಬರ್ 11 ರಂದು ಪೂರ್ಣಗೊಳಿಸಲಾಯಿತು. ಮಹಾಶಾಂತಿ, ಸಹಸ್ರ ಕಲಶಾಭಿಷೇಕ, ಕಲ್ಯಾಣೋತ್ಸವಗಳನ್ನು ಶ್ರೀ ವರಾಹಸ್ವಾಮಿಯವರಿಗೆ ಮಾಡಲಾಗಿದ್ದು ಕಲ್ಯಾಣೋತ್ಸವದ ನಂತರ ಶ್ರೀ ವರಾಹಸ್ವಾಮಿಯವರ ದೇವಾಲಯದ ಶ್ರೀ ವೆಂಕಟೇಶ್ವರ ಸ್ವಾಮಿಯ ಉತ್ಸವ ಮೂರ್ತಿಯನ್ನು ತಿರುಮಲೆಯ ರಥಬೀದಿಯಲ್ಲಿ ಮೆರವಣಿಗೆಯಲ್ಲಿ ಕೊಂಡೊಯ್ಯಲಾಯಿತು.

ದಾಖಲೆಗಳ ಪ್ರಕಾರ ಶ್ರೀ ವರಾಹಸ್ವಾಮಿಯವರ ದೇವಾಲಯದ ಜೀರ್ಣೋದ್ಧಾರ ಈ ಹಿಂದೆ ಐದು ದಶಕಗಳ ಮೊದಲು ಎಂದರೆ ಕ್ರಿ. ಶ. 1922 ರಲ್ಲಿ ನಡೆದಿತ್ತು. ನಂತರ ಬಾಲಾಲಯ, ಮಹಾಶಾಂತಿ ಸಂಪ್ರೋಕ್ಷಣೆ, ಮಂಡಲಾಭಿಷೇಕಗಳು 1982 ರಲ್ಲಿ ಮಾತ್ರವೇ ಎಂದರೆ ಇದೀಗ ತಾನೇ ನಡೆದಿವೆ.

# ವಾರ್ತಾಲಹರಿ

## ತಿರುಮಲೆಯಲ್ಲಿ ರಾಷ್ಟ್ರಪತಿ ಜ್ಞಾನಿ ಜೈಲ್‌ಸಿಂಗ್

ಭಾರತದ ನೂತನ ರಾಷ್ಟ್ರಪತಿ ಶ್ರೀ ಜ್ಞಾನಿ ಜೈಲ್‌ಸಿಂಗ್ ಅವರು ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಅರ್ಚಿಸಿ ಸ್ವಾಮಿಯ ಅನುಗ್ರಹವನ್ನು ಪಡೆದರು. ರಾಷ್ಟ್ರಪತಿ ಭವನದ ಅಧಿಕೃತ ಅತಿಥೇಯಳಾದ ತಮ್ಮ ಮಗಳು ಶ್ರೀಮತಿ ಕೌರ್ ಅವರೊಂದಿಗೆ ಆಗಮಿಸಿದ ಶ್ರೀ ಜೈಲ್‌ಸಿಂಗ್ ಅವರಿಗೆ ಆಲಯ ಮರ್ಯಾದೆಗಳೊಡನೆ ತಿ ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಮತ್ತಿತರ ಸದಸ್ಯರು, ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಮತ್ತಿತರ ಅಧಿಕಾರಿಗಳು ದೇವಾದಾಯ ಇಲಾಖಾಮಂತ್ರಿ ಶ್ರೀ ಪಿ. ವಿ. ಚೌದುರಿ ಮತ್ತಿತರರು ಸ್ವಾಗತ ನೀಡಿದರು.

ರಾಷ್ಟ್ರಪತಿಯವರು ಶ್ರೀ ವೆಂಕಟೇಶ್ವರಸ್ವಾಮಿಯ ಏಕಾಂತಸೇವೆ, ಸುಪ್ರಭಾತಸೇವೆ ಹಾಗೂ ಶುಕ್ರವಾರದ ಅಭಿಷೇಕಗಳಲ್ಲಿ ಭಾಗವಹಿಸಿದರು.

## ಕ್ರೋಟನ್ ಜೈಲ್‌ಸಿಂಗ್

ತಿರುಮಲೆ ತಿರುಪತಿ ದೇವಸ್ಥಾನಗಳ ಉಪವನ ವಿಭಾಗದಲ್ಲಿ ಆಲಂಕಾರಿಕ ಕ್ರೋಟನ್‌ಗಳ ಕಸಿ ಮಾಡುವಿಕೆಯು ಯಶಸ್ವಿಯಾಗುತ್ತ ನಡೆದು ಅಲ್ಲಿನ ಉದ್ಯಾನವನಗಳ ಸೌಂದರ್ಯ ದಿನೇದಿನೇ ಹೆಚ್ಚುತ್ತಿರುವುದು ಯಾತ್ರಿಕರಿಗೆ ತಿಳಿದ ಸಂಗತಿ.

ಈಚೆಗೆ ಭಾರತದ ರಾಷ್ಟ್ರಪತಿ ಶ್ರೀ ಜೈಲ್‌ಸಿಂಗ್ ಅವರು ತಿರುಮಲೆಗೆ ಬಂದಾಗ ಅವರ ಸಂದರ್ಶನದ ನೆನಪಿಗಾಗಿ ಹೊಸ ಕಸಿಮಾಡಿದ ಕ್ರೋಟನ್ ಒಂದಕ್ಕೆ ಅವರ ಹೆಸರನ್ನಿಡಲಾಯಿತು. ಮೈಸೂರು ಹುಲಿ, ಹಾಗೂ ಕೆಂಪೇಗೌಡ ಕ್ರೋಟನ್‌ಗಳ ಕಸಿಮಾಡುವಿಕೆಯಿಂದ ಉಂಟಾದ ಹೊಸಬೀಜಗಳಿಂದ ಪಡೆದ 'ಕ್ರೋಟನ್ ಜೈಲ್‌ಸಿಂಗ್'ಗೆ ಮಾತೃಸಸ್ಯ ಮೈಸೂರು ಹುಲಿಯ ಅಚ್ಚ ಕಡುಹಸಿರು. ಹಳದಿ ವರ್ಣಗಳೂ, ಪಿತೃಸಸ್ಯ ಕೆಂಪೇಗೌಡದ ಎಲೆಗಳ ಬಟ್ಟಲು ಆಕಾರವೂ ಸಂದಿವೆ.

ಚಿತ್ರದಲ್ಲಿ ರಾಷ್ಟ್ರಪತಿ ಶ್ರೀ ಜೈಲ್‌ಸಿಂಗ್ ಹಾಗೂ ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ ಅವರುಗಳನ್ನು ಕ್ರೋಟನ್ ಜೈಲ್‌ಸಿಂಗ್ ನೊಡನೆ ಕಾಣಬಹುದು.

( ಒಳಗಿನ ರಕ್ಷಾ ಪತ್ರಗಳನ್ನೂ ಅವುಗಳ ವಿವರಗಳಿಗಾಗಿ 40 ನೇ ಪುಟವನ್ನೂ ಗಮನಿಸಿ )






ತಿರುಮಲೇಶನಿಗೆ ಈ ತಿಂಗಳು ಮತ್ತೊಂದು ಬ್ರಹ್ಮೋತ್ಸವ ನಡೆಯುತ್ತದೆ. ನಿತ್ಯ ಕಲ್ಯಾಣನಿಲಯನಾದ ಶ್ರೀನಿವಾಸನಿಗೆ ನಡೆಯುವ ಉತ್ಸವಗಳು ಅಸಂಖ್ಯವಾದರೂ ಬ್ರಹ್ಮೋತ್ಸವಗಳ ಮಟ್ಟಿಗೆ ಹೆಚ್ಚಿನ ಪ್ರಾಮುಖ್ಯವಿದೆ. ತಿರುಮಲೆಯ ಚರಿತ್ರೆಯಲ್ಲಿ ವರ್ಷದಲ್ಲಿ ಹನ್ನೊಂದು ಬ್ರಹ್ಮೋತ್ಸವಗಳು ನಡೆದ ಕಾಲವೂ ಉಂಟು. ಆದರೆ ಇದು ಈಗ ಅಧಿಕಮಾಸದ ವರ್ಷದಲ್ಲಿ ಎರಡು ಬ್ರಹ್ಮೋತ್ಸವಗಳಾಗಿ ನಿಂತಿದೆ.

ಸ್ವಾಮಿಗೆ ನಡೆಯುವ ಬ್ರಹ್ಮೋತ್ಸವ, ದೇವೀಪೂಜೆ ನಡೆಯುವ ಶರನ್ನವರಾತ್ರಿಯೊಡನೆ ಸೇರಿ ಬರುವುದೆಂದರೆ ಯಾವುದೋ ವಿಶೇಷವಿರಬೇಕು. ಅಧಿಕಮಾಸದ ಕಾರಣದಿಂದ ಪ್ರತಿ ಮೂರನೇ ವರ್ಷದಲ್ಲೂ ಭಾದ್ರಪದದಲ್ಲಿ ಒಂದು ಬ್ರಹ್ಮೋತ್ಸವ ನಡೆದರೂ ಅಶ್ವಯುಜ ಮಾಸದಲ್ಲಿ ಎರಡನೇ ಬ್ರಹ್ಮೋತ್ಸವ ಸ್ವಾಮಿಯ ನವರಾತ್ರಿ ಉತ್ಸವಗಳೆಂಬಂತೆ ನಡೆಯುವುದು ಗಮನಾರ್ಹ. ಇಂತಹ ಪದ್ಧತಿ ಇತರ ಯಾವ ದೇವಾಲಯದಲ್ಲೂ, ಮುಖ್ಯವಾಗಿ ಪುರುಷ ದೈವತವಿರುವ ಯಾವ ದೇವಾಲಯದಲ್ಲೂ – ಸಂಪ್ರದಾಯವಾಗಿ ಕಂಡುಬರದು. ದೇವೀ ಸ್ವರೂಪಗಳು ಆರಾಧಿತವಾಗುತ್ತಿರುವ ದೇವಾಲಯಗಳಲ್ಲಿನ ಪುರುಷ ದೇವರು ಎಷ್ಟೇ ಪ್ರಸಿದ್ಧನಾದರೂ ಈ ಸಮಯದ ಆರಾಧನೆ ಮಾತ್ರ ದೇವೀಮೂರ್ತಿಗೇ ಹೌದು. ಎಂದ ಮೇಲೆ ತಿರುಮಲೆಯಲ್ಲಿ ಎರಡು ನವರಾತ್ರಿಗಳೂ ಸಮಾನವಾದ ಸ್ಥಾಯಿಯಲ್ಲಿ ಒಂದೇ ಪುರುಷ ಮೂರ್ತಿಗೆ ನಡೆಯುತ್ತಿದೆಯೆಂದರೆ, ಈ ಪದ್ಧತಿಯಲ್ಲಿ ಸಮಾಜಕ್ಕೆ ಯಾವುದೇ ವಿಶಿಷ್ಟವಾದ ಸಂದೇಶವಿದೆ ಎನ್ನಿಸದಿರದು.

ಸರ್ವ ವಿಶಿಷ್ಟಗುಣ ಪರಿಪೂರ್ಣನಾದ ಪರಮಾತ್ಮನು ಒಬ್ಬನೇ ಎಂದೂ, ಆತನ ಸಂಕಲ್ಪ ಅಥವಾ ಇಚ್ಛಾಶಕ್ತಿಯಿಂದ ಈ ಚರಾಚರ ಜೀವಜಾಲ ಸಹಿತವಾದ ಹದಿನಾಲ್ಕು ಲೋಕಗಳೂ ಆವಿರ್ಭವಿಸಿತೆಂದೂ, ಈ ಅನಂತ ವಿಶ್ವದ ಒಳಗೂ ಹೊರಗೂ ನಾರಾಯಣನೇ ಆವರಿಸಿರುವನೆಂದೂ, ಶಾಸ್ತ್ರಗಳು ಘೋಷಿಸುತ್ತಿವೆ. ಆದರೆ ಆತ ಅವಾಙ್ಮಾನಸ ಗೋಚರ. ಆತನಿಗೂ ಆತನ ಸೃಷ್ಟಿಗೂ ಮಧ್ಯೆ ಮಹತ್ತರವಾದ, ಅಚ್ಛೇದ್ಯವಾದ ಆವರಣವಿದೆ. ಪರಮಾತ್ಮ ಸಂಕಲ್ಪಾನುಸಾರವಾಗಿ ಈ ಮಾಯಾಶಕ್ತಿ ಪಾಂಚಭೌತಿಕ ವಸ್ತುಸಂಪನ್ನವಾಗಿ ವಿಶ್ವ ಸಂಸೃಜನ, ಸಂಭರಣ, ಸಂಹರಣ ಕಾರ್ಯಕ್ರಮಗಳನ್ನು ನಿರ್ವಹಿಸುತ್ತದೆ. ಈ ಶಕ್ತಿಯನ್ನೇ ನಾರಾಯಣ ಶಕ್ತಿಯೆಂದೂ, ವಿಷ್ಣು ಸಂಬಂಧಿ ಆಗಿರುವುದರಿಂದ ವೈಷ್ಣವಿಯೆಂದೂ, 'ಮಮ ಮಾಯಾ ದುರತ್ಯಯಾ' ಎಂದು ಪರಮಾತ್ಮನೇ ಹೇಳಿದಂತೆ ದುರ್ಗಮ ಆದುದರಿಂದ ದುರ್ಗೆಯೆಂದೂ, ಈಶ್ವರ ಪ್ರಣಿಧಾನದಲ್ಲಿರುವುದರಿಂದ ಈಶ್ವರಿಯೆಂದೂ, ಸರ್ವಜೀವ ಸಂಕ್ಷೇಮಕಾರಿಯಾಗಿ ಸರ್ವಮಂಗಳೆಯೆನಿಸಿ, ಸರ್ವಜೀವಜಾಲಕ್ಕೆ ಮೂಲಭೂತವಾದ ಪ್ರಕೃತಿಮಾತೆಯಾಗಿ ಮನ್ನಣೆ ಪಡೆಯುತ್ತಿದೆ. ಆ ಚೈತನ್ಯ ಶಕ್ತಿ ಒಬ್ಬನೇ ಸೂರ್ಯ ವಸ್ತು ಭೇದದಿಂದಾಗಿ ಆಕೃತಿ ಭೇದವಾಗಿ ಪ್ರತಿಬಿಂಬಿಸುವಂತೆ ವಿಶ್ವ ಸೃಜನ ಕಾರ್ಯದಲ್ಲಿ ಸೃಷ್ಟಿಕರ್ತನಿಗೆ ಅನುಕೂಲವತಿಯಾಗಿ ವಾಗ್ದೇವಿಯಾಗಿಯೂ, ವಿಶ್ವ ಸಂಭರಣ ಕಾರ್ಯದಲ್ಲಿ ವಿಷ್ಣು ಪತ್ನಿಯಾಗಿ ಧನದಯಾ ದೇವಿಯಾಗಿಯೂ, ವಿಶ್ವ ಸಂಹರಣ ಕಾರ್ಯದಲ್ಲಿ ಶಂಕರನಿಗೆ ಶಾಂಕರಿಯಾಗಿಯೂ ನೆರವಿಗೆ ಬರುತ್ತದೆ. ಸೃಷ್ಟಿ ಸ್ಥಿತಿ ಲಯಗಳ ಕಾರ್ಯ ತ್ರಿಮೂರ್ತಿಗಳದ್ದೇ ಆದರೂ, ಅವುಗಳನ್ನು ಕ್ರಮಬದ್ಧವಾಗಿ ನಿರ್ವಹಿಸಲು ಅವರ ಆತ್ಮ ಸ್ವರೂಪವಾಗಿ ಅವರ ಹೃದಯಾಂತರಂಗದಲ್ಲಿ ನರ್ತಿಸುತ್ತಿರುತ್ತದೆ. ಎಂತಲೇ ಆ ಮಹತ್ತರ ಶಕ್ತಿಗೆ 'ಬ್ರಹ್ಮ ವಿಷ್ಣು ಶಿವಾತ್ಮಿಕಾಯೈ ನಮಃ' ಎಂದು ನಮಸ್ಕರಿಸುತ್ತೇವೆ. ಹಾಗಾಗಿ ಈ ನವರಾತ್ರಿಯಲ್ಲಿ ನಡೆಯುವ ಉತ್ಸವಗಳೆಲ್ಲ ಆ ತ್ರೈಮೂರ್ತಿ ಸ್ವರೂಪಾರಾಧನೆ ಎನ್ನಬಹುದು.

ಮತ್ತೊಂದು ಅಂಶದಿಂದಲೂ ಈ ಉತ್ಸವಗಳಿಗೆ ಪ್ರತ್ಯೇಕತೆಯಿದೆಯೆನ್ನಿಸುತ್ತದೆ. ಈ ಶರನ್ನವರಾತ್ರಿ ವೀರ ಸ್ವರೂಪಕ್ಕೆ ಪೂಜನೀಯ. ಎಂತಲೇ ಸ್ತ್ರೀರೂಪೀ ಅನಂತ ಶಕ್ತಿಮಯ ಸ್ವರೂಪವನ್ನು ಮಹಾದೇವಿಯಂತೆ ಪೂಜೆ ಮಾಡಲಾಗುತ್ತದೆ.

ಶ್ರೀ ವೆಂಕಟೇಶ್ವರಸ್ವಾಮಿ ವೆಂಕಟಾಚಲದ ಅಧೀಶ್ವರ, ಎಂದರೆ ಪ್ರಭು. ವಿಶ್ವಪಾಲನೆಯ ಕರ್ತವ್ಯದಲ್ಲಿ ದುಷ್ಟ ಶಿಕ್ಷಣ, ಶಿಷ್ಟರಕ್ಷಣೆ ಪ್ರಮುಖ. ದುಷ್ಟ ಶಿಕ್ಷಣಕ್ಕಾಗಿ ಜೈತಯಾತ್ರೆ, ಪ್ರಭುವಿಲಾಸಕ್ಕೆ ಮೃಗಯಾವಿಹಾರ (ಪಾರುವೇಟೆ) ಸಹಜವಾಗಿ ನಡೆಯುವ ಕಾರ್ಯಕ್ರಮಗಳು. ಈ ನವರಾತ್ರಿಯಲ್ಲಿ ನಡೆಯುವ ಪ್ರದರ್ಶನ ಶೌರ್ಯ ಪ್ರದರ್ಶನ. ಸ್ವಾಮಿಯೂ ಸಹ ದಶಮಿಯಂದು ಪಾರುವೇಟೆಗೆ ಹೊರಡುವುದು, ಶಮೀ ವೃಕ್ಷದ ಬಳಿ ವೀರತ್ವ ಪ್ರದರ್ಶಿಸುವುದು ಇದಕ್ಕೆ ನಿದರ್ಶನ.

ಮಹಾಲಕ್ಷ್ಮೀ ಸ್ವರೂಪದಲ್ಲಿ ವೀರಲಕ್ಷ್ಮಿ ಸಹ ಒಂದು ಭಾಗವೇ ಆಗಿ, ಸ್ವಾಮಿ ಲಕ್ಷ್ಮೀ ಸಮಾದರಣವನ್ನು ಈ ರೀತಿಯಲ್ಲಿ ನಿರೂಪಿಸಿದಂತಿದೆ. ಮಹಾಲಕ್ಷ್ಮಿ ಶ್ರೀನಿವಾಸನ ವಕ್ಷಸ್ಥಲವಾಸಿಯಾಗಿರುವುದರಿಂದ ಈ ಶರನ್ನವರಾತ್ರಿಯಲ್ಲಿ ನಡೆಯುವ ಉತ್ಸವಗಳಿಂದಾಗಿ ಕೇವಲ ಮಹಾದೇವೀ ಉಪಾಸನೆಯೇ ಅಲ್ಲದೆ ಲಕ್ಷ್ಮೀ ಸಹಿತನಾದ ಶ್ರೀಮನ್ನಾರಾಯಣ ಸಮರ್ಚನಾ ಫಲವೂ ಸಹ ನಮಗೆ ದೊರೆಯುತ್ತದೆ.

ಹೀಗೆ ಪ್ರತಿ ಉತ್ಸವದಲ್ಲೂ ಒಂದು ಮಹತ್ತರವಾದ ಸಂದೇಶವನ್ನು ಹಿರಿಯರು ನೀಡುತ್ತಲೇ ಇರುವರು. ಇಂದು ಮಹಿಷಾಸುರ ಮರ್ದಿನಿಯ ಹೆಸರಿನಲ್ಲಿ ನಾವು ನಡೆಸುವ ಉತ್ಸವ ಕೇವಲ ಮಹಿಷದ ಬಲಿಯಲ್ಲ; ಅಹಂಕಾರ ಅಜ್ಞಾನಗಳ ಮಹಿಷದ ಮರ್ದನವಾಗಿ ಸರ್ವಸುಖ, ಶುಭದಾಯಕ ಸ್ಥಿತಿಯ ಸ್ಥಾಪನೆ ಮಾಡುವುದೇ ಆಗಿದೆ. ಅದನ್ನು ತಿಳಿಯುವ – ತಿಳಿದು ನಡೆಯುವ ಹೃದಯವಿರಬೇಕಷ್ಟೆ.

# ಮಹಾಕ್ಷೇತ್ರ - ಮಧೂರು

ನಮ್ಮ ದೇಶ ಬಹಳ ಹಿಂದಿನಿಂದಲೂ ಪ್ರಸಿದ್ಧಿಯನ್ನು ಹೊಂದಿರುವ ತಪೋ ಭೂಮಿ. ಆರ್ಯಾವರ್ತನೆಂದು ಹೆಸರಾದ ಈ ಭರತವರ್ಷ ದೇವಾಲಯಗಳ ನೆಲೆ ವೀಡು. ನಮ್ಮ ದೇಶದ ದೇವಾಲಯಗಳಾದರೋ ಆಸ್ತಿಕ ಮಹಾಜನರ ಪವಿತ್ರ ಕೇಂದ್ರಗಳು. ಮಾನವನ ಮನಃಸಾಗರದ ಮಂಥನದಿಂದ ಭಕ್ತಿಯೆಂಬ ನವನೀತವನ್ನು ಹುಟ್ಟಿಸಿ, ಅವನನ್ನು ಧಾರ್ಮಿಕ ದೈವಿಕ ಮತ್ತು ಆಧ್ಯಾತ್ಮಿಕ ಚಿಂತನೆಯಲ್ಲಿ ಮಗ್ನನಾಗುವಂತೆ ಮಾಡುವ ದಿವ್ಯ ಕೇಂದ್ರಗಳು ನಮ್ಮ ದೇವಾಲಯಗಳು.

ಈಗಿನ ಕೇರಳ ರಾಜ್ಯಕ್ಕೆ ಸೇರಿದ ಕಾಸರಗೋಡು ತಾಲ್ಲೂಕಿನ ಮಧೂರು ಬಹಳ ಹಿಂದಿನಿಂದಲೂ ಪ್ರಸಿದ್ಧವಾದ ಗಣಪತಿ ಕ್ಷೇತ್ರ. ಇಲ್ಲಿನ ಮೂಲ ದೇವರು ಅನಂತೇಶ್ವರ. ಆರಾಧ್ಯ ದೈವ ಶ್ರೀ ಸಿದ್ಧಿ ವಿನಾಯಕ.

ಮಧೂರು ಎಂಬ ಹೆಸರು ಈ ಸ್ಥಳಕ್ಕೆ ಬಂದಿರುವುದೂ ಒಂದು ಕುತೂಹಲದಾಯಕ ಸಂಗತಿ. ಬಹಳ ಕಾಲದ ಹಿಂದೆ ಒಬ್ಬ ಹರಿಜನ ಹೆಣ್ಣಿದ್ದಳು. ಅವಳ ಹೆಸರು ಮಧುರಾ. ಆಕೆ ಬೇಸಾಯದಿಂದ ಜೀವಿಸುತ್ತಿದ್ದವಳು. ಒಂದುದಿನ ಮಣ್ಣಿನಲ್ಲಿ ಹೂತಿದ್ದ ಶಿವಲಿಂಗವೊಂದು ಆಕೆಗೆ ಸಿಕ್ಕಿತು. ಊರ ಜನರೆಲ್ಲಾ ಸೇರಿ ಅದನ್ನು ಪ್ರತಿಷ್ಠೆ ಮಾಡಿಸಿದರು. ಆ ಲಿಂಗವೇ ಇಂದಿನ ಅನಂತೇಶ್ವರ ಲಿಂಗ ಮತ್ತು ಆ ಹೆಣ್ಣಿನ ಹೆಸರೇ ಆ ಊರಿನ ಹೆಸರು. ಮಧುರಾ ಎಂಬ ಹೆಸರಿನಿಂದ ಮಧುಪೂರು ಎಂಬ ಹೆಸರಾಗಿ ಕಾಲಕ್ರಮೇಣ ಮಧೂರ ಎಂದಾಗಿದೆ.

ತುಳು ನಾಡಿನ ಪ್ರಸಿದ್ಧ ಯಕ್ಷಗಾನ ಕವಿ ಪಾರ್ತಿ ಸುಬ್ಬನು ಮಧೂರಿನ ಮಹಾಗಣಪತಿಯನ್ನು ಕುರಿತು –

" ಪೊಡವಿಯೊಳಿಹ ಬುಧ ಕುಲ
ಪರಿಪಾಲನೆಗಾಗಿ
ಮಧುಪುರದೊಳಗವತರಿಸಿದ ಮದನೇಶ
ಗೋಡೆಯಿಂದೊಡೆದು ಮೂಡಿ ಜಗಕೆ
ದಯಮಾಡಿದ ಗಜವದನ"

ಎಂದು ಕೊಂಡಾಡಿದ್ದಾನೆ. ಈ ಗಣಪತಿಯು ಪರಶು ರಾಮ ಪ್ರತಿಷ್ಠೆ ಎಂಬ ಹೇಳಿಕೆಯೂ ಇದೆ. ಆದರೆ ಸ್ಕಾಂದ ಪುರಾಣದ ಸಹ್ಯಾದ್ರಿ ಖಂಡದಲ್ಲಿ ಈ ರೀತಿಯ ಉಲ್ಲೇಖವಿದೆ –

ಪವಿತ್ರವಾದ ಪಯಸ್ವಿನೀ ನದಿಯು ಪಡುಗಡಲನ್ನು ಸೇರುವ ಆ ಪುಣ್ಯ ಭೂಮಿಯಲ್ಲಿ ಅನೇಕ ಮುನಿಗಳು ತಪವನ್ನಾಚರಿಸುತ್ತಿದ್ದರು. ಒಮ್ಮೆ ದ್ರಾವಿಡದ ಅರಸ ಧರ್ಮಗುಪ್ತನೆಂಬುವನು ಬಂದು ಆ ಋಷಿಗಳಲ್ಲಿ ಪರಮೇಶ್ವರನ ಕೃಪೆಗಾಗಿ ಒಂದು ಯಾಗವನ್ನು ಮಾಡಿಸಬೇಕೆಂದು ಬೇಡುತ್ತಾನೆ. ಅದೇ ರೀತಿ ಯಾಗಶಾಲೆಯ ನಿರ್ಮಾಣವಾಗಿ ಯಾಗವೂ ಪ್ರಾರಂಭವಾಗುತ್ತದೆ. ಆದರೆ ಪ್ರಮಾದವಶಾತ್ ಯಾಗದ ಆರಂಭಕ್ಕೆ ಮೊದಲು ವಿಘ್ನೇಶ್ವರನ ಪೂಜೆ ಮಾಡುವುದಿಲ್ಲ. ವಿನಾಯಕನ ಕೋಪದಿಂದ ಬಿರುಮಳೆಯು ಸುರಿದು ಯಾಗವು ನೀರುಪಾಲಾಗುತ್ತದೆ. ಈ ಪ್ರಕೋಪಕ್ಕೆ ಕಾರಣವೇನೆಂದು ಋಷಿಗಳೂ, ಧರ್ಮಗುಪ್ತರಾಜನೂ, ಕುಮಾರಧಾರಾಕ್ಷೇತ್ರದಲ್ಲಿ ಇರುತ್ತಿದ್ದ ವಾಸುಕಿಯನ್ನು ಕೇಳಲಾಗಿ ಗಣಪತಿಯ ಪೂಜೆ ಮಾಡದಿರುವುದೇ ಕಾರಣವೆಂದು ತಿಳಿದು ಬರುತ್ತದೆ. ಆಗ ಅವರೆಲ್ಲ ಸೇರಿ ಯಾಗಶಾಲೆಯ ಒಂದು ಗೋಡೆಯಲ್ಲಿ ಗಣಪತಿಯ ಚಿತ್ರವನ್ನು ಬರೆದು ಭಕ್ತಿಯಿಂದ ಪೂಜಿಸುತ್ತಾರೆ. ಹೀಗೆ ಭಕ್ತಿಯಿಂದ ಪ್ರಾರ್ಥಿಸಲಾಗಿ ಗಣಪತಿಯು ಪ್ರಸನ್ನನಾಗಿ ಗೋಡೆಯಿಂದೊಡೆದು ಬಂದು ಪ್ರತ್ಯಕ್ಷನಾಗುತ್ತಾನೆ. ಅನಂತರ ವಿನಾಯಕ ಕೃಪೆಯಿಂದ ಯಜ್ಞವು ಸಾಂಗವಾಗಿ ಕೊನೆಗೊಂಡು ರಾಜನ ಇಷ್ಟಾರ್ಥವು ನೆರವೇರುತ್ತದೆ. ಆಗ ಆ ರಾಜನು ವಿಘ್ನೇಶ್ವರನನ್ನು ಪೂಜಿಸಿದ ಆ ಭಿತ್ತಿಯ ಸುತ್ತಲೂ ಗೋಪುರವನ್ನು ಕಟ್ಟಿಸಿ ತಾನು ಯಜ್ಞಮಾಡಿದ ಸ್ಥಳದಲ್ಲಿ ಒಂದು ಶಿವಾಲಯವನ್ನು ಕಟ್ಟಿಸುತ್ತಾನೆ. ಈ ರೀತಿಯಾಗಿ ಸ್ಕಾಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ಮಧೂರನ್ನು ಕುರಿತು ಉಲ್ಲೇಖಿಸಲಾಗಿದೆ.

ಈ ದೇವಾಲಯದ ವಸ್ತುಸ್ಥಿತಿಯೂ ಪುರಾಣದಲ್ಲಿ ವರ್ಣಿತವಾದಂತೆಯೇ ಇದೆ. ದೇವಸ್ಥಾನದ ಎಡಭಾಗದಲ್ಲಿ ಗೋಡೆಯಲ್ಲಿ ಬರೆದ ವಿಘ್ನೇಶ್ವರನ ಭವ್ಯವಾದ ಮಣ್ಣಿನ ವಿಗ್ರಹವಿದೆ. ಶಿವಲಿಂಗವು ಗುಡಿಯ ಮಧ್ಯಭಾಗದಲ್ಲಿದೆ. ಅತ್ಯಂತ ಇಕ್ಕಟ್ಟಾದ ಒಂದು ಪಾರ್ಶ್ವದ ಗೋಡೆಯಲ್ಲಿರುವ ಮಹಾಗಣಪತಿ ಮತ್ತು ಗರ್ಭಗುಡಿಯ ಮಧ್ಯದಲ್ಲಿರುವ ಶಿವಲಿಂಗ ಇವೆರಡನ್ನೂ ನೋಡಿದರೆ ಮೊದಲು ಗಣಪತಿಯನ್ನು ಪ್ರತಿಷ್ಠಾಪಿಸಿ ಆ ಮೇಲೆ ಶಿವಲಿಂಗದ ಪ್ರತಿಷ್ಠಾಪನೆ ಮಾಡಿ, ನಂತರ ಅವೆರಡೂ ಒಂದೇ ಕಟ್ಟಡದಲ್ಲಿರುವಂತೆ ಗೋಪುರವನ್ನು ರಚಿಸಿರುವಂತೆ ಕಾಣುತ್ತದೆ. ದೇವಸ್ಥಾನದ ಗರ್ಭಗುಡಿ ಶಂಖಾಕಾರವಾಗಿದ್ದು ವೈಶಿಷ್ಟ್ಯಪೂರ್ಣವಾಗಿದೆ ಮತ್ತು ದೇವಸ್ಥಾನದ ಪುರಾತನತೆಯ ಕುರುಹಾಗಿದೆ.

ಮಧೂರು ದೇವಸ್ಥಾನದ ಶ್ರೀಸಿದ್ಧಿ ವಿನಾಯಕನ ಮೂರ್ತಿಯು ದಕ್ಷಿಣಾಭಿಮುಖವಾಗಿದೆ. ಮೂರ್ತಿಯು ಕುಳಿತಿರುವ ಭಂಗಿ, ಮೂರ್ತಿಯ ಔನ್ನತ್ಯ ಮತ್ತು ಸೊಂಡಿಲಿನ ದಕ್ಷಿಣಾಭಿಮುಖವಾದ ಆಕುಂಚನ (ವಕ್ರತೆ) ಇವುಗಳಿಂದ ಗಣಪತಿಯು ಅದ್ಭುತ ಮಹಿಮಾಶಾಲಿ ಎನ್ನುವುದಕ್ಕೆ ನಿದರ್ಶನಗಳಾಗಿವೆ. ಅದರಿಂದಲೇ ಮಧೂರಿನ ಮೂಲ ದೇವರು ಅನಂತೇಶ್ವರನಾದರೂ, ಅದು ಮಹಾಗಣಪತಿ ಕ್ಷೇತ್ರವೆಂದೇ ಪ್ರಸಿದ್ಧವಾಗಿದೆ.

ಈ ಮಹಾಗಣಪತಿಯ ಮಹತ್ವದ ಸೇವೆ. ಮೂಡಪ್ಪ ಸೇವೆ. ಮೂಡಪ್ಪ ಸೇವೆ ಎಂದರೆ ಹದಿನಾರು ಮುಡಿ ಅಕ್ಕಿಯನ್ನು (ಒಂದು ಮುಡಿ 42 ಸೇರು) ಪುಡಿ ಮಾಡಿ ಅದಕ್ಕೆ ತಕ್ಕಷ್ಟು ಬೆಲ್ಲ ಮತ್ತು ತೆಂಗಿನಕಾಯಿಯನ್ನು ಬೆರೆಸಿ ತುಪ್ಪದಲ್ಲಿ ಬೇಯಿಸಿ ಅಪ್ಪ

(36ನೇ ಪುಟ ನೋಡಿ)

**ಶ್ರೀಮತಿ ಕೆ. ಎನ್. ಪದ್ಮಾವತಿ,**
ಬಿ. ಎಸ್ಸಿ.

## ಹರಿದಾಸ ವಾಣಿ

ಭಗವಂತನಲ್ಲಿ ನಾವು ತೋರಿಸುವ ಅತಿಶಯವಾದ ಪ್ರೇಮವೇ ಭಕ್ತಿ. ಭಕ್ತಿಯೋಗವನ್ನು ಕುರಿತು ಭಗವದ್ಗೀತೆ, ಭಾಗವತ, ನಾರಾಯಣೀಯಂ, ಬ್ರಹ್ಮವೈವರ್ತ ಮುಂತಾದ ಗ್ರಂಥಗಳು ಪುಷ್ಟೀಕರಿಸುತ್ತವೆ. ಭಕ್ತಿಪಂಥವು ವೈಷ್ಣವರಲ್ಲಿ ಹೆಚ್ಚಾಗಿ ಬೆಳೆಯಿತೆನ್ನಬಹುದು. ಭಕ್ತಿಯೋಗಕ್ಕೆ ಭಗವತ್ಪ್ರೇಮಯೋಗವೆಂದು ಮತ್ತೊಂದು ಹೆಸರು. ವ್ಯಾಸಸೂತ್ರ, ಶಾಂಡಿಲ್ಯಸೂತ್ರ, ನಾರದಸೂತ್ರ ಮುಂತಾದುವು ಭಕ್ತಿತತ್ತ್ವದ ಆಧಾರ ಗ್ರಂಥಗಳಾಗಿವೆ. ಆಚಾರ್ಯತ್ರಯರು, ಶ್ರೀಕೃಷ್ಣ ಚೈತನ್ಯ, ಹರಿದಾಸಶ್ರೇಷ್ಠರು ಮತ್ತು ಸಂಗೀತದ ತ್ರಿಮೂರ್ತಿಗಳು ಭಕ್ತಿಪಂಥವನ್ನೇ ವಿಪುಲವಾಗಿ ಬೆಳೆಸಿದರು. ಭಕ್ತಿಯ ಸ್ವರೂಪವನ್ನು ಹಲವು ರೀತಿಗಳಲ್ಲಿ ವಿವರಿಸಲಾಗಿದೆ. ಪ್ರಹ್ಲಾದನು ಹೇಳಿರುವಂತೆ– ವಿವೇಕ ರಹಿತರಾದವರಿಗೆ ಅನಿತ್ಯವಾದ ವಿಷಯಗಳಲ್ಲಿ ಎಂದೆಂದಿಗೂ ನಾಶವಾಗದ ಯಾವ ಬಗೆಯ ಪ್ರೀತಿ ಇರುವುದೋ, ಅಂತಹ ಪ್ರೀತಿಯು ನಿನ್ನನ್ನು ಸ್ಮರಿಸುತ್ತಿರುವಾಗ ನನ್ನ ಹೃದಯುವನ್ನು ಎಂದಿಗೂ ಬಿಟ್ಟುಹೋಗದೆ ಇರಲಿ – ಎಂಬಂತಿರುವ, ಭಗವಂತನಲ್ಲಿ ವ್ಯಾಮೋಹವುಳ್ಳ ಪ್ರೀತಿಯೇ ಭಕ್ತಿ.

ಯಾ ಪ್ರೀತಿರವಿವೇಕಾನಾಂ
ವಿಷಯೇಷ್ವನಪಾಯಿನೀ।
ತ್ವಾಂ ಅನುಸ್ಮರತಃ ಸಾ ಮೇ
ಹೃದಯಾನ್ಮಾಪಸರ್ಪತು ॥

(ವಿಷ್ಣು ಪುರಾಣ)

ಭಾಗವತದಲ್ಲಿ ಭಕ್ತಿಯ ವಿವಿಧ ಮಾರ್ಗಗಳನ್ನು ಕುರಿತು ವಿವರವಾಗಿ ಹೇಳಲ್ಪಟ್ಟಿದೆ. ನಾರದನ ಶಿಷ್ಯನಾದ ಪ್ರಹ್ಲಾದನು ತನ್ನ ತಂದೆಯಾದ ಹಿರಣ್ಯಕಶಿಪನಿಗೆ ಭಕ್ತಿಯ ಒಂಭತ್ತು ವಿಧಗಳನ್ನು ವಿವರಿಸಿದ್ದಾನೆ.

ಶ್ರವಣಂಕೀರ್ತನಂ ವಿಷ್ಣೋಃ
ಸ್ಮರಣಂ ಪಾದಸೇವನಮ್।
ಅರ್ಚನಂ ವಂದನಂ ದಾಸ್ಯಂ
ಸಖ್ಯಮಾತ್ಮ ನಿವೇದನಮ್ ॥

ವಿಷ್ಣುವಿನ ಮಹಿಮೆಯನ್ನು ಕೇಳುವುದು, ಹಾಡುವುದು, ಸ್ಮರಿಸುವುದು, ಆತನ ಪಾದಗಳನ್ನು ಸೇವಿಸುವುದು, ಪೂಜಿಸುವುದು, ವಂದಿಸುವುದು, ಆತನ ಸೇವಕನಾಗಿರುವುದು, ಸ್ನೇಹಿತನಂತೆ ಆತನನ್ನು ಪ್ರೀತಿಸುವುದು ಮತ್ತು ನಮ್ಮ ಆತ್ಮಾರ್ಪಣೆ ಮಾಡುವುದು– ಇವೇ ಆ ನವವಿಧಭಕ್ತಿ. ಇವುಗಳ ಹಿರಿಮೆಯನ್ನು ಕುರಿತು ಪುರಂದರದಾಸರು 'ಹರಿಯ ಒಂಭತ್ತು ಭಕ್ತಿಯ ಬಲ್ಲಧೀರ। ಮರಳಿ ಸಂಸ್ಕೃತಿಯದಾರಿಗೆ ಹುಟ್ಟಬಾರ। ದುರಾಚಾರ ದುಷ್ಕೃತಿಗಳನು ಕಂಡು ಸೇರ। ಹಿರಿಯರೊಳು ಬಿರುನುಡಿಯ ಜಿಹ್ವೆಗೆ ತಾರ। ಪುರಂದರ ವಿಠಲ ರಾಯನ ಉದಾರ। ಚರಣಾಬ್ಜ ನಿಷ್ಠೆ ಅಂಕಿಡಿ ಇಟ್ಟುತೋರ ॥' ಎಂದು ವಿವರಿಸಿದ್ದಾರೆ. ನಾರದರು ತಮ್ಮ ಭಕ್ತಿ ಸೂತ್ರದಲ್ಲಿ ಭಕ್ತಿಯು ಒಂದೇ ರಸವಾದರೂ ಅದು ಹನ್ನೊಂದು ರೂಪಗಳಲ್ಲಿ ವ್ಯಕ್ತವಾಗುತ್ತದೆಂದು ಹೇಳಿದ್ದಾರೆ. ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯಾಸಕ್ತಿ, ಪರಂ ಅವಿರಹಾಸಕ್ತಿ–"ರೂಪಾ ಏಕಧಾಪಿ ಏಕಾದಶಧಾ ಭವತಿ ॥" (ನಾರದ ಭಕ್ತಿ ಸೂತ್ರ–82).

# ತ್ಯಾಗಯ್ಯ - ಪುರಂದರರು

ಕನ್ನಡದಲ್ಲಿ ಭಕ್ತಿ ಪಂಥಕ್ಕೆ ಅತ್ಯಂತ ಹಿರಿಯ ಸ್ಥಾನ ನೀಡಿದ ಹರಿದಾಸಶ್ರೇಷ್ಠರೂ, ಕರ್ಣಾಟಕ ಸಂಗೀತ ಪಿತಾಮಹರೂ ಆದ ಪುರಂದರದಾಸರು ಅತಿಸರಳವಾದ ಪಿಳ್ಳಾರಿ ಗೀತಗಳಿಂದ ಸುಳಾದಿಯವರೆಗೆ ಎಲ್ಲಾವಿಧವಾದ ಸಾವಿರಾರು ಕೀರ್ತನೆಗಳನ್ನು ರಚಿಸಿ ಭಕ್ತಿಪಂಥವನ್ನೂ, ಸಂಗೀತವನ್ನೂ ಸಂಪದ್ಭರಿತವಾಗಿಸಿದರು. ಸಂಗೀತದ ಲಾವಣ್ಯ ಮತ್ತು ಭಕ್ತಿಯ ಸೊಬಗಿನಿಂದ ತುಂಬಿರುವ ಇವರ ರಚನೆಗಳಿಂದ ಮುಂದೆ ಮಹಾವಾಗ್ಗೇಯಕಾರರಾದ ಕ್ಷೇತ್ರಜ್ಞ, ತ್ಯಾಗರಾಜಸ್ವಾಮಿಗಳು, ಶ್ಯಾಮಶಾಸ್ತ್ರಿಗಳು, ಮುತ್ತುಸ್ವಾಮಿದೀಕ್ಷಿತರು ಮತ್ತು ಸ್ವಾತಿ ತಿರುನಾಳ್ ಮಹಾರಾಜರು ಸ್ಫೂರ್ತಿಪಡೆದರು.

ಶ್ರೀ ತ್ಯಾಗರಾಜರು (1767 – 1847) ಬಾಲ್ಯದಲ್ಲಿ ತನ್ನ ತಾಯಿ ಹಾಡುತ್ತಿದ್ದ ಪುರಂದರದಾಸರ ಕೀರ್ತನೆಗಳನ್ನೇ ಕೇಳಿ ಕಲಿತಿದ್ದರು. ಅವರ ತಂದೆಯು ದೇವರ ಪೂಜಾ ಸಮಯದಲ್ಲಿ ಹಾಡುತ್ತಿದ್ದ ದೇವರನಾಮಗಳನ್ನು ತಾವೂ ಹಾಡುತ್ತಿದ್ದರು. ಅವರ ಕೃತಿಗಳಿಗೆ ಪುರಂದರದಾಸರ ಕೃತಿಗಳು ಮಾರ್ಗದರ್ಶಕವೂ ಸ್ಫೂರ್ತಿಯ ನೆಲೆಯೂ ಆದುವು. ತ್ಯಾಗರಾಜರು ಅವರ ಪದ್ಧತಿಯನ್ನು ಅನುಸರಿಸಿದರು ಎಂಬುದು ಇಬ್ಬರು ಕೃತಿಗಳನ್ನು ಪರಿಶೀಲಿಸಿದರೆ ವೇದ್ಯವಾಗುತ್ತದೆ. ದಾಸರ ಪ್ರಭಾವವು ತ್ಯಾಗರಾಜರ ಮೇಲೆ ಅಪಾರವಾಗಿತ್ತು. ತಮ್ಮ 'ಪ್ರಹ್ಲಾದಭಕ್ತಿ ವಿಜಯ' ದಲ್ಲಿ "ದುರಿತವ್ರಾತಮುಲೆಲ್ಲನು"ಎಂಬ ಕೃತಿಯಲ್ಲಿ 'ಪರವಶುಡೈ ವೆಲಯು ಪುರಂದರದಾಸುನಿ ಮಹಿಮಲನು'ಎಂದು ದಾಸರಿಗೆ ತಮ್ಮ ಗೌರವವನ್ನು ವ್ಯಕ್ತಪಡಿಸಿದ್ದಾರೆ. ಪುರಂದರದಾಸರ ಕೃತಿಗಳಿಂದ ಸ್ಫೂರ್ತಿಪಡೆದು ಅವರ ಮೇಲ್ಪಂಕ್ತಿಯಲ್ಲಿ ಭಕ್ತಿಯುತವಾದ ಕೃತಿರತ್ನಗಳನ್ನು ರಚಿಸಿ ಹಾಡಿ ಆದರ್ಶ ಗುರುವಿನ ಆದರ್ಶ ಶಿಷ್ಯರಾಗಿ ಸಂಗೀತ ಮತ್ತು ಸಾಹಿತ್ಯಕ್ಷೇತ್ರದಲ್ಲಿ ಅಮರರಾಗಿದ್ದಾರೆ. ಪುರಂದರದಾಸರಂತೆಯೇ ತ್ಯಾಗರಾಜರೂ ಸಹ ಎಲ್ಲ ವಿಧವಾದ ಭಕ್ತಿಯ ಸ್ವರೂಪವುಳ್ಳ ಕೃತಿಗಳನ್ನು ರಚಿಸಿ ತಮ್ಮ ಆರಾಧ್ಯದೈವವಾದ ಶ್ರೀರಾಮಚಂದ್ರನನ್ನು ಆರಾಧಿಸಿದರು.

ನವವಿಧ ಭಕ್ತಿಯಲ್ಲಿ ಮೊದಲನೆಯದು ಶ್ರವಣಭಕ್ತಿ. ಭಗವಂತನ ವಿಚಾರವನ್ನು ಪದೇ ಪದೇ ಕೇಳುತ್ತಿರುವುದರಿಂದ ನಾವು ಕಾಲಕ್ರಮದಲ್ಲಿ ಐಹಿಕ ವಿಷಯಗಳ ವ್ಯಾಮೋಹವನ್ನು ಬಿಟ್ಟು ಮೋಕ್ಷಸಾಮ್ರಾಜ್ಯಲಕ್ಷ್ಮಿಯನ್ನು ಸೂರೆಗೊಳ್ಳುತ್ತೇವೆ. ಹರಿನಾಮ ಶ್ರವಣವನ್ನು ಕುರಿತು ದಾಸರು 'ಹರಿಕಥಾಶ್ರವಣ ಮಾಡೋ ನಿರಂತರ', 'ರಾಮನಾಮಪಾಯಸಕ್ಕೆ, ಕೃಷ್ಣ ನಾಮಸಕ್ಕರೆ', 'ರಾಮ ಮಂತ್ರವ ಜಪಿಸೋ'ಮುಂತಾದ ಕೀರ್ತನೆಗಳಲ್ಲಿ ಹಾಡಿದ್ದಾರೆ. 'ಹರಿಕಥಾಶ್ರವಣವು ಪರಗತಿಗೆ

ಡಾ ॥ ವಿ. ಎಸ್. ಸಂಪತ್ ಕುಮಾರಾಚಾರ್ಯ ಎಂ.ಎ.



ನಿರ್ಧಾರ', 'ಸರಸಿಜನಾಭನ ಸರ್ವದಾ ಹೊಗಳುತೆ ದುರಿತ ದೂರಕೀಡಾಡೋ' ಎಂದಿದ್ದಾರೆ. ಏಕೆಂದರೆ 'ರಾಮಮಂತ್ರವು ಸುಲಭದಿಂದಲಿ ಮೋಕ್ಷ ಸೂರೆಗೊಂಬುವ ಮಂತ್ರ'. ಭಗವಂತನ ನಾಮಶ್ರವಣ ಮಾಡುವವನು 'ಅರವತ್ತು ಗಳಿಗೆಗಳ ವ್ಯರ್ಥ ಹೋಗಾಡ ಪರಮಪದವನ್ನೈದುವನು ಅವನು ಗಾಢ ನರಕದಾ ಬಟ್ಟೆ, ದೂರದಲೊಮ್ಮೆ ನೋಡ' ಮತ್ತು 'ಪುರಂದರ ವಿಠಲನಂಘ್ರಿಯನು ಗಾಢ ತರಲಪ್ಪುವ ವೈಯ್ಯನುರೆದು ತಾನಾಡ' ಎಂದು ತಮ್ಮ ಸುಳಾದಿ ಯೊಂದರಲ್ಲಿ ಹೇಳಿದ್ದಾರೆ.

ತ್ಯಾಗರಾಜರು ತಮ್ಮ ಭಜನೆಗಳ ಮೂಲಕ ಇತರರಿಗೆ ದಿವ್ಯನಾಮ ಶ್ರವಣವಾಗುವ ಅವಕಾಶ ಕಲ್ಪಿಸಿದರು ಮತ್ತು ತಮ್ಮ ಶಿಷ್ಯರು ನಾಮಾವಳಿಗಳನ್ನೂ, ಕೀರ್ತನೆಗಳನ್ನೂ ಏಕಾದಶಿ ಮತ್ತು ಉಂಛವೃತ್ತಿ ಭಜನೆಗಳಲ್ಲಿ ಹಾಡುತ್ತಿದ್ದುದನ್ನು ಕೇಳಿ ಆನಂದಪಡುತ್ತಿದ್ದರು. ಮಧ್ಯಮಾವತಿ ರಾಗದ 'ರಾಮಕಥಾ ಸುಧಾರಸ', ಸಿಂಧುರಾಮಕ್ರಿಯರಾಗದ 'ಸುಧಾಮಾಧುರ್ಯ' ಎಂಬ ಕೃತಿಗಳಲ್ಲಿ ಶ್ರವಣ ಭಕ್ತಿಯ ಹಿರಿಮೆಯನ್ನು ಹೇಳಿದ್ದಾರೆ. "ಸೀತಾ ಸೌಮಿತ್ರಿ ಭರತಾದಿಗಳೊಂದಿಗೆ ಈ ಭೂಮಿಯಲ್ಲಿ ಅವತಾರಮಾಡಿರುವ ಶ್ರೀ ರಾಮನ ಕಥೆಯೆಂಬ ಅಮೃತವನ್ನು ಪಾನಮಾಡಿದ ಪ್ರತಿಯೊಬ್ಬರಿಗೂ ಒಂದು ಭಕ್ತಿಸಾಮ್ರಾಜ್ಯವು ಲಭಿಸುವುದು, ರಾಮಕಥಾ ಸುಧಾರಸವು ಧರ್ಮಾರ್ಥ ಕಾಮಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳನ್ನೂ ಪ್ರತಿಯೊಬ್ಬರಿಗೂ ಕರುಣಿಸುತ್ತದೆ. ಈ ಅಮೃತವು ಧೈರ್ಯ ಮತ್ತು ಆನಂದಕ್ಕೆ ಆಯವಾಗಿದೆ, ಕರ್ಮಬಂಧನದಿಂದ ಉರಿಯುತ್ತಿರುವ ಸಂಸಾರವೆಂಬ ಸಾಗರದಿಂದ ದಾಟಿಸಲು ನಾವೆಯೋಪಾದಿಯಲ್ಲಿದೆ. ಅಲ್ಲದೆ ಸಮಸ್ತ ಪಾಪವನ್ನೂ ಹೋಗಲಾಡಿಸುತ್ತದೆ" ಎಂಬುದು ರಾಮಕಥಾಸುಧಾ ಎಂಬ ಕೃತಿಯ ಭಾವಾರ್ಥ.

ಎರಡನೆಯ ವಿಧದ ಭಕ್ತಿ ಕೀರ್ತನ, ಪುರಂದರ ದಾಸರು ತಮ್ಮ ಸುಳಾದಿಯೊಂದರಲ್ಲಿ ಕೀರ್ತನ ಭಕ್ತಿಯನ್ನು ಕುರಿತು 'ಹರಿಯಕೀರ್ತನೆ ಭಕುತಿ ತುಂಬಿಪೇಳ್ವ, ಹರಿಯಂತೆ ಕೂಗಿ ಸಜ್ಜನರೊಳಗೆ ಬಾಳ್ವ, ದುರಿತಗಜಗಳ ಮಂಡೆಗಳನೇರಿ ಸೀಳ್ವ, ಹರುಷಾಮೃತಾಬ್ಧಿಯೊಳು ಇಳಿಮುಳುಗಿ ಏಳ್ವ, ಪುರಂದರ ವಿಠಲರಾಯನ ಹೊಂದಿ ಬಾಳ್ವ' ಎಂದು ವಿವರಿಸಿದ್ದಾರೆ. ಹರಿನಾರಾಯಣ, ಹರಿಯ ನೆನೆಯಿರೋ, ಕೃಷ್ಣಮಂತ್ರವ ಜಪಿಸೋ, ಏ ಮನುಜ, ನಾಮಕೀರ್ತನೆ ಅನುದಿನ ಮಾಳ್ಪಗೆ, ಗೋವಿಂದ ಎನ್ನಿರೊ, ನಾರಾಯಣ ಎನ್ನಿರೊ, ಮುಂತಾದ ಕೀರ್ತನೆಗಳಲ್ಲಿ ಕೀರ್ತನ ಭಕ್ತಿಯನ್ನು ಕುರಿತು ಹಾಡಿದ್ದಾರೆ. ತ್ಯಾಗರಾಜರು ತಮ್ಮ ಜೀವಮಾನ ಪೂರ್ತಿ ಶ್ರೀರಾಮನನ್ನು ಕುರಿತು ಕೀರ್ತನೆಗಳನ್ನು ರಚಿಸಿ ಹಾಡುವುದರಲ್ಲಿ ವಿನಿಯೋಗಿಸಿದರು. ಅವರ ಜೀವನವೇ ಈ ಬಗೆಯ ಭಕ್ತಿಯ ಪ್ರತೀಕವಾಗಿದೆ. ಏಳಾವತಾರ ಎಂಬ ಮುಖಾರಿರಾಗದ ಕೃತಿಯಲ್ಲಿ ಭಗವಂತನನ್ನು ಕುರಿತು "ಎಲೈ ರಾಮನೇ! ನೀನು ಯಾವ ಉದ್ದೇಶದಿಂದ ರಾಮನಾಗಿ ಅವತರಿಸಿದೆ? ಯುದ್ಧ ಮಾಡುವುದಕ್ಕಾಗಿಯೇ? ಅಥವಾ ಅಯೋಧ್ಯೆಯ ಪಾಲನೆ ಮಾಡುವುದಕ್ಕಾಗಿಯೇ? ಇಲ್ಲವೇ ಯೋಗಿಗಳು ನಿನ್ನ ದರ್ಶನ ಪಡೆಯಲೆಂದೋ ಅಥವಾ ಸಂಸಾರವೆಂಬ ಖಾಯಿಲೆಯಿಂದ ನರಳುತ್ತಿರುವವರನ್ನು ಕಾಪಾಡಲಿಕ್ಕಾಗಿಯೇ, ಇಲ್ಲವೇ ಶತರಾಗರತ್ನಮಾಲಿಕೆಯನ್ನು ರಚಿಸಿರುವ ತ್ಯಾಗರಾಜನಿಗೆ ವರವನ್ನು ಕರುಣಿಸಲೆಂದೋ?"ಎಂದು ಕೇಳುತ್ತಾರೆ. ಕಾಪಿರಾಗದ 'ಇಂತ ಸೌಖ್ಯಮನಿ' ಮತ್ತು 'ಅತಡೇ ಧನ್ಯುಡುರಾ', ಬಿಲಹರಿ ರಾಗದ 'ಇಂತಕನ್ನ ನಾನಂದಮೇಮಿ' ಎಂಬ ಕೃತಿಗಳಲ್ಲಿ ಭಗವಂತನನ್ನು ಕೀರ್ತಿಸಿ ಹಾಡುವುದು ಮತ್ತು ನರ್ತಿಸುವುದಕ್ಕೆ ಮಿಗಿಲಾದ ಆನಂದವಿಲ್ಲ ಎಂದೂ ನಾಮಕೀರ್ತನೆಮಾಡುವವರೇ ಧನ್ಯರು ಎಂದು ಕೀರ್ತನಭಕ್ತಿಯ ಹಿರಿಮೆಯನ್ನು ಸಾರಿದ್ದಾರೆ. ಇವರ ದಿವ್ಯನಾಮಕೀರ್ತನೆಗಳು ಮತ್ತು ಪ್ರಹ್ಲಾದಭಕ್ತಿ ವಿಜಯದಲ್ಲಿ ಬರುವ ಕೆಲವು ಕೃತಿಗಳು ಸೇರಿ ಶತರಾಗರತ್ನಮಾಲಿಕೆ ಎನ್ನಿಸಿಕೊಂಡಿವೆ.

ಮೂರನೆಯದು ಸ್ಮರಣಭಕ್ತಿ. ಸದಾಕಾಲದಲ್ಲಿ ಪರಮಾತ್ಮನನ್ನು ಸ್ಮರಿಸಿ ಧ್ಯಾನಮಾಡುವುದೇ ಸ್ಮರಣ ಭಕ್ತಿಯ ಲಕ್ಷಣ. ವಿಷ್ಣುವನ್ನು ಮರೆಯುವುದು ವಿಪತ್ತು, ವಿಷ್ಣುವಿನ ಸ್ಮರಣೆಯೇ ಸಂಪತ್ತು (ವಿಪದೋ ನೈವ ವಿಪದಃ ಸಂಪದೋ ನೈವ ಸಂಪದಃ। ವಿಪದ್ವಿಸ್ಮರಣಂ ವಿಷ್ಣೋಃ ಸಂಪನ್ನಾರಾಯಣ ಸ್ಮೃತಿಃ॥). ಪುರಂದರದಾಸರು ಈಗ ಮಾಡೆಲೊ ರಾಮಧ್ಯಾನ, ರಾಮಮಂತ್ರ ಜಪಿಸೋ, ಸ್ಮರಣೆ ಒಂದೇ ಸಾಲದೆ–ಇತ್ಯಾದಿ ಹಲವಾರು ಕೀರ್ತನೆಗಳಲ್ಲಿ ಸ್ಮರಣಭಕ್ತಿಯನ್ನು ಕುರಿತು ಹಾಡಿದ್ದಾರೆ. ಹರಿಸ್ಮರಣೆ ಮಾಡುವವನು "ಹರಿಸ್ಮರಣೆಗೆ ವಿಸ್ಮೃತಿಯವನಾವ ಜರೆದ। ಚಿರಕಾಲದಘವನೊಮ್ಮಿಂದೊಮ್ಮೆ ಕರೆದ। ಪರಮಭಾಗವತರ ಸಮ್ಮೇಳವನು ಬರೆದ। ನೆರೆಹೊರೆಗೆ ಎಲ್ಲ ಮುಕುತಿಯನು ಕರೆದ। ವರಬಿಂಬ ಕಾಂಬ ಕಂಗಳನು ತೆರೆದ। ಪುರಂದರ ವಿಠಲ ರಾಯನ ಬೆರೆದ॥" ಎಂದಿದ್ದಾರೆ. ಏಕೆಂದರೆ "ಹರಿಯೆಂದು ಮನದಲ್ಲಿ ಮರೆದೊಮ್ಮೆ ನೆನೆದರೆ ದುರಿತ ಪರ್ವತ ಖಂಡಿಪುದು ವಜ್ರದಂತೆ". ಹತ್ತು ಲಕ್ಷ ಗೋದಾನಮಾಡಿದರೂ, ಅನುದಿನ ವ್ರತಗಳನ್ನು ಆಚರಿಸಿದರೂ, ಶತಕೋಟಿಯಜ್ಞವ ಮಾಡಿದರೂ, ಗಂಗೆ ಕಾಳಿಂದಿ ಗೋದಾವರಿ ಕಾವೇರಿ ತುಂಗಭದ್ರೆಯಲ್ಲಿ ಸ್ನಾನಮಾಡಿದರೂ ಮಂಗಳಮೂರುತಿ ಪುರಂದಲವಿಠಲ ರಂಗನ ಸ್ಮರಣೆಗೆ ಸರಿಸಮಾನವಲ್ಲ. ಪರಮಾತ್ಮನ ಚಿಂತನೆ ಅಥವಾ ಸ್ಮರಣೆ ತ್ಯಾಗರಾಜರ ಜೀವನದ ಉಸಿರಾಗಿತ್ತು. 'ಶ್ರೀಪತೇ ನೀಪದ' ಎಂಬ ನಾಗಸ್ವರಾವಳಿರಾಗದ ಕೃತಿಯಲ್ಲಿ ರಾಮಚಿಂತನವೇ ತಮ್ಮ ಜೀವನವೆಂದೂ, 'ರಾಮಕೋದಂಡರಾಮ' ಎಂಬ ಭೈರವಿರಾಗದ ದಿವ್ಯನಾಮಕೀರ್ತನೆಯಲ್ಲಿ 'ರಾಮಚಿಂತನೇ ಚಾಲು' ಎಂದೂ 'ಸ್ಮರಣೇ ಸುಖಮು' ಎಂಬ ಜನರಂಜನಿ ರಾಗದ ಕೃತಿಯಲ್ಲಿ "ನರನಾಗಿ ಹುಟ್ಟಿರುವವನಿಗೆ ನಿಷ್ಕಾಮದಿಂದ ರಾಮನಾಮಸ್ಮರಣೆ ಮಾಡುವುದೇ ಸುಖಕರ. ರಾಜಯೋಗಿಗಳಿಗೆ ಹೀಗೆ ಸ್ಮರಣೆ ಮಾಡುವುದು ಆನಂದವುಂಟುಮಾಡುತ್ತದೆ. ರಾಮನಾಮವನ್ನು ಯಾವಾಗಲೂ ಸ್ಮರಿಸುತ್ತಿರುವುದರಿಂದ ಹೃದಯವು ಭಕ್ತಿಯಿಂದ ತುಂಬಿ ರಾಮನಾಮವು ರಾಮನರೂಪವಾಗಿ ಪರಿವರ್ತನೆ ಹೊಂದುತ್ತದೆ ಯಲ್ಲವೇ?" ಎಂದೂ, 'ಪಕ್ಕಲನಿಲಬಡಿ' ಎಂಬ ಖರಹರಪ್ರಿಯರಾಗದ ಕೃತಿಯಲ್ಲಿ 'ಮನಸುನ ವಲಚಿ ನೈಮರಚಿಯುನ್ನಾರ'— ರಾಮನಸ್ಮರಣೆ ಅಥವಾ ಧ್ಯಾನದಲ್ಲಿ ತನ್ನನ್ನೇ ತಾನೇ ಮರೆಯುತ್ತೇನೆ ಎಂದಿದ್ದಾರೆ.

ಪಾದಸೇವೆಯು ನಾಲ್ಕನೆಯ ವಿಧದಭಕ್ತಿ. ಪರಮಾತ್ಮನ ಪಾದಾರವಿಂದಗಳನ್ನು ಸೇವಿಸಿ ಕೃತಾರ್ಥರಾದವರಲ್ಲಿ ಭರತ ಮತ್ತು ಆಂಜನೇಯ ಆದರ್ಶ ಪುರುಷರು. ಪಾದಸೇವನೆಯ ಹಿರಿಮೆಯನ್ನು ಕುರಿತು ಪುರಂದರದಾಸರು 'ಹರಿಪಾದ ಸೇವನ ಧ್ಯಾನ ಬಲ್ಲಣ್ಣ। ಪುಟಕ್ಕಿಟ್ಟ ಚಿನ್ನದ ಸುಖದಬಣ್ಣ। ದುರುರುಚಿಯಿಂದ ದುರ್ವಿಷಯ ಕೆತ್ತಕಣ್ಣ। ಹರಿ ಗುರುಗಳಿಗೆ ಅಲ್ಲದೆ ಶರಣೆನ್ನ। ಪುರಂದರವಿಠಲ ಪತಿತಪಾವನ್ನ। ಚರಣಾಬ್ಜ ರಸವೀಂಟಿ ಮೊಲೆಪಾಲನುಣ್ಣ॥" ಎಂದಿದ್ದಾರೆ. ಭಗವಂತನ ಪಾದುಕೆಯ ಪ್ರಭಾವವನ್ನು ಕುರಿತು ವೇದಾಂತದೇಶಿಕರು ಪಾದುಕಾಸಹಸ್ರವೆಂಬ ಕಾವ್ಯಗ್ರಂಥವನ್ನೇ ರಚಿಸಿದ್ದಾರೆ. ಬಿಡೆ ನಿನ್ನ ಪಾದವ, ದೃಷ್ಟಿ ನಿನ್ನ ಪಾದದಲ್ಲಿ, ಸೇವಕತನದ ರುಚಿಯೇ ನರಿದ್ಯೋ ಮುಂತಾದ ಕೀರ್ತನೆಗಳಲ್ಲಿ ದಾಸರು ಭಗವಂತನ ಪಾದಸೇವನೆಯನ್ನು ಕುರಿತು ಹಾಡಿದ್ದಾರೆ. ಶ್ರೀರಾಮನ ಪಾದಗಳು ಎರಡು ವಿಚಿತ್ರವಾದ ಕೆಲಸಗಳನ್ನು ಮಾಡಿವೆ, ಮೊದಲನೆಯದು ಅಹಲ್ಯೆಯ ಉದ್ಧಾರ. ಎರಡನೆಯದು ಪಾದುಕೆಗಳೇ ರಾಜ್ಯಭಾರಮಾಡಿದುವು. ತ್ಯಾಗರಾಜರು ಅಮೃತವಾಹಿನಿ ರಾಗದ ಶ್ರೀರಾಮಪಾದಮಾ, ರಾಮಪ್ರಿಯರಾಗದ ಸಂದೇಹಮು, ಬೇಗಡೆರಾಗದ ನೀಪಾದಪಂಕಜ, ಹಂಸಧ್ವನಿ ರಾಗದ ರಘುನಾಯಕಾ, ಪೂರ್ಣಷಡ್ಜ ರಾಗದ ಶ್ರೀಮಾನಿನಿ ಮನೋಹರಗಳಲ್ಲಿ ಪಾದಸೇವನಾ ಭಕ್ತಿಯನ್ನು ಕುರಿತು ಹಾಡಿದ್ದಾರೆ. "ಎಲೈ ಶ್ರೀರಾಮನ ಪಾದಗಳೆ! ನಿಮ್ಮ ಕೃಪೆಯಾದರೆ ಸಾಕು [illegible]।

ನನ್ನ ಮನಸ್ಸನ್ನು ನಿಮ್ಮ ಗೃಹವನ್ನಾಗಿ ಮಾಡಿಕೊಳ್ಳಿ. ನಿಮ್ಮನ್ನು ಬ್ರಹ್ಮ, ಸನಕಸನಂದನ, ಇಂದ್ರ ಮುಂತಾದವರೆಲ್ಲರೂ ಪೂಜಿಸುತ್ತಾರೆ. ಬಹಳವಾಗಿ ಪಶ್ಚಾತ್ತಾಪಪಟ್ಟು ಬಹಳ ದಿನಗಳಿಂದಲೂ ಶಿಲೆಯಾಗಿ ನಿಮ್ಮ ದಾರಿಯಲ್ಲಿ ಬಿದ್ದಿದ್ದ ಅಹಲ್ಯೆಯನ್ನು ಕನಿಕರದಿಂದ ಉದ್ಧಾರಮಾಡಿದ್ದೀರಿ. ಅದೇರೀತಿ ನನ್ನನ್ನು ಧನ್ಯನಾಗಿ ಮಾಡಿ" ಎಂದು ಶ್ರೀರಾಮುಪಾದಮಾ ಎಂಬ ಕೃತಿಯಲ್ಲಿ ಬೇಡಿದ್ದಾರೆ. ರಘುನಾಯಕ ಎಂಬ ಕೃತಿಯಲ್ಲಿ ಶ್ರೀರಾಮನ ಪಾದಪದ್ಮಗಳನ್ನು ಬಿಟ್ಟಿರಲು ಸಾಧ್ಯವಿಲ್ಲವೆಂದೂ, ಶ್ರೀಮಾನಿನಿ ಮನೋಹರ ಎಂಬ ಕೃತಿಯಲ್ಲಿ ಶ್ರೀರಾಮನ ಪಾದಸೇವೆ ಮಾಡುವುದೊಂದೇ ತಮ್ಮ ಜೀವನದ ಹಂಬಲವೆಂದೂ ಹೇಳಿದ್ದಾರೆ. ಅವರ ದೃಷ್ಟಿಯಲ್ಲಿ ಶ್ರೀರಾಮನ ಪಾದಗಳಿಗಿಂತ ಪಾದುಕೆಗಳೇ ಮೇಲು. ರಾಮನ ಪಾದುಕೆಗಳನ್ನು ಪೂಜಿಸಿದ ಮಹರ್ಷಿಗಳೆಲ್ಲರೂ ರಾಮನ ಸದನವಾದ ವೈಕುಂಠವನ್ನು ಸೇರಿದರು. ಆದರೆ ಅವನ ಪಾದುಕೆಗಳನ್ನು ಪೂಜಿಸಿದ ಭರತನು ಶ್ರೀರಾಮನನ್ನೇ ಸೇರಿದನು ಎಂಬ ಅಭಿಪ್ರಾಯವನ್ನು "ಸಂದೇಹಮುನು ದೀರ್ಪವೈಯ್ಯಾ" ಎಂಬ ಕೃತಿಯಲ್ಲಿ ಸೂಚಿಸಿದ್ದಾರೆ. ಮೇಲಿನ ಕೃತಿಗಳ ರಾಗಗಳ ಹೆಸರುಗಳೂ ಸಹ ಗಮನಾರ್ಹವಾಗಿವೆ.

ಅರ್ಚನಭಕ್ತಿಯು ಐದನೆಯವಿಧ. ಪರಮಾತ್ಮನಿಗೆ ಸರ್ವಾಂಗಕ್ಕೂ ಅರ್ಚನೆಯ ರೀತಿಯಲ್ಲಿ ಅಲಂಕಾರಮಾಡುವುದೇ ಈ ವಿಧವಾದ ಭಕ್ತಿಯ ತತ್ತ್ವ. ಈ ಭಕ್ತಿಯನ್ನು ಕುರಿತು ಪುರಂದರದಾಸರು "ಹರಿಯ ಅರ್ಚನೆಯ ಭಕ್ತಿಯು ಪ್ರವೀಣ। ತೆರತೆರದಿ ಬರುವ ಎಡರನು ಒಮ್ಮೆ ಕಾಣ। ಹರಿಗೆ ದೇಹೇಂದ್ರಿಯವರ್ಪಿಸಿ ಪ್ರಾಣ। ಹರಿಪುರದೊಳಗೆ ಮಾಡಿದ ತನ್ನ ಕಾಣ। ಪುರಂದರವಿಠಲರಾಯನ ಪೂಜೆ ತ್ರಾಣ। ವರಿತು ಕಾಯದೊಳಿಟ್ಟು ಪಡೆವ ನಿರ್ವಾಣ॥" ಎಂದಿದ್ದಾರೆ. ಹೇಗೆ ಅರ್ಚಿಸಲಿ ನಿನ್ನ, ನೈವೇದ್ಯಕೊಳ್ಳೋ ರಂಗ, ಶೃಂಗಾರವಾಗಿ ಹುದು ಶ್ರೀಹರಿಯ ಮಂಚ, ಲಾಲಿಲಾಲಿ ಹರಿಯ ಲಾಲಿ, ಆಡಿಸಿದಳು ಯಶೋದೆ — ಮುಂತಾದ ಕೀರ್ತನೆಗಳಲ್ಲಿ ಈ ವಿಧವಾದ ಭಕ್ತಿಯನ್ನು ವಿವರಿಸಿದ್ದಾರೆ. ಈ ಪೂಜಾವಿಧಿಯಲ್ಲಿ ತ್ಯಾಗರಾಜರ ಉತ್ಸವ ಸಂಪ್ರದಾಯ ಕೀರ್ತನೆಗಳು ಬಹಳ ಮುಖ್ಯವಾದುವು. ಹೆಚ್ಚರಿಕಗಾ ರಾರಾ ಎಂಬ ಯದುಕುಲ ಕಾಂಭೋಜಿರಾಗದ ಕೃತಿಯಲ್ಲಿ ಪರಮಾತ್ಮನಿಗೆ ಸ್ವಾಗತ ಬಯಸಿದ್ದಾರೆ. ರಾರಾ ಸೀತಮ್ಮ ಎಂಬ ಹಿಂದೋಳವಸಂತರಾಗ ಮತ್ತು ಜೇತುಲಾರ ಶೃಂಗಾರ ಎಂಬ ಖರಹರ ಪ್ರಿಯ ರಾಗದ ಕೃತಿಗಳಲ್ಲಿ ಪರಮಾತ್ಮನನ್ನು ಅವರು ಅಲಂಕರಿಸುತ್ತಿದ್ದ ರೀತಿಯನ್ನು ವಿವರಿಸಿದ್ದಾರೆ. ತುಳಸೀಬಿಲ್ವ ಎಂಬ ಕೇದಾರಗೌಳರಾಗದ ಕೃತಿಯಲ್ಲಿ ಅಂಗಪೂಜೆಯನ್ನೂ, ಆರಗಿಂಪವೇ ಎಂಬ ತೋಡಿರಾಗದ ಕೃತಿಯಲ್ಲಿ ನೈವೇದ್ಯವನ್ನೂ, ವಿಡಮು ಸೇಯವೇ ಎಂಬ ಖರಹರಪ್ರಿಯರಾಗದ ಕೃತಿಯಲ್ಲಿ ತಾಂಬೂಲ ಸಮರ್ಪಣೆಯನ್ನೂ, ಉಪಚಾರಮುಲನು ಎಂಬ ಭೈರವಿರಾಗದ ಕೃತಿಯಲ್ಲಿ ಛತ್ರ, ಚಾಮರ, ವ್ಯಜನ ಇತ್ಯಾದಿಗಳನ್ನು ಸಮರ್ಪಿಸಿ, ಲಾಲಿ ಲಾಲಿ ಎಂಬ ಹರಿಕಾಂಭೋಜಿರಾಗದ ಕೃತಿಯಲ್ಲೂ, ಉಯ್ಯಾಲಲೂಗವಯ್ಯಾ ಎಂಬ ನೀಲಾಂಬರಿರಾಗದ ಕೃತಿಯಲ್ಲಿ ಆಂದೋಳಿಕಾ ಉಪಚಾರಗಳನ್ನೂ, ಪತಿಕಿ ಹಾರತಿರೇ, ಎಂಬ ಸುರಟಿರಾಗದ ಕೃತಿಯಲ್ಲಿ ಆರತಿಯನ್ನೂ, ಪೂಲಪಾನ್ಪುಮೀದ ಎಂಬ ಆಹಿರಿರಾಗದ ಕೃತಿಯಲ್ಲಿ ಜಾಜಿಹೂವಿನ ಹಾಸಿಗೆ, ಹಾಲು, ವೀಳ್ಯ, ಗಂಧ ಮುಂತಾದುವುಗಳ ಅರ್ಪಣೆಯನ್ನೂ, 'ಶ್ರೀರಾಮ ಶ್ರೀರಾಮ' ಎಂಬ ಕೃತಿಯಲ್ಲಿ ಶ್ರೀರಾಮನು ನಿದ್ರೆಹೋಗುವುದಕ್ಕಾಗಿಯೂ, ಮೇಲುಕೋವಯ್ಯ (ಬೌಳಿ) ಮತ್ತು ಮೇಲುಕೋ ದಯಾನಿಧೇ ಎಂಬ ಕೃತಿಗಳಲ್ಲಿ ಪರಮಾತ್ಮನಿಗೆ ಸುಪ್ರಭಾತ ಸೇವೆಯನ್ನೂ ಸಮರ್ಪಿಸಿದ್ದಾರೆ.

ವಂದನಭಕ್ತಿಯು ಆರನೇವಿಧವಾದ ಭಕ್ತಿ. ಈ ಭಕ್ತಿಯನ್ನು ಕುರಿತು ಪುರಂದರದಾಸರು "ಹರಿಮೂರ್ತಿಗಷ್ಟಾಂಗವೊಡಮಟ್ಟು ನಿಚ್ಚ। ಉರು ಪಾಪಾಟವಿಗೆ ಗಮ್ಮನೆ ಇಟ್ಟು ಕಿಚ್ಚ। ಸುರಲೋಕ ಮುಂತಾದ ಸಿರಿಗವಮೆಚ್ಚ। ನರರ ಸಂಪದವೆಲ್ಲ ಸ್ಥಿರವೆಂದು ನೆಚ್ಚ। ಪುರಂದರ ವಿಠಲ ನಂಘ್ರಿಯ ನಂಬಿದ ಹುಚ್ಚ। ನಿರಯದರಸನಿಗೆ ಬೆದರನು ಬೆಚ್ಚ।" ಎಂದು ವರ್ಣಿಸಿದ್ದಾರೆ. ಗೋವಿಂದ ನಮೋ ಗೋವಿಂದ, ನಾರಾಯಣತೇ ನಮೋ ನಮೋ, ನಾರಾಯಣಾಯ ನಮೋ ನಾಗೇಂದ್ರ ಶಯನಾಯ, ವಂದಿಸುವರೆ ಧನ್ಯರು — ಎಂಬ ಕೀರ್ತನೆಗಳಲ್ಲಿ ವಂದನಭಕ್ತಿಯನ್ನು ಕುರಿತು ಹಾಡಿದ್ದಾರೆ. ತ್ಯಾಗರಾಜರು ವಂದನಮು ರಘುನಂದನ ಎಂಬ ಶಹಾನರಾಗದ ಮತ್ತು ಬಲಹಂಸ ರಾಗದ ದಂಡಮು ಬೆಟ್ಟೆದನುರಾ ಎಂಬ ಕೃತಿಗಳಲ್ಲಿ ವಂದನಭಕ್ತಿಯನ್ನು ಕುರಿತು ಹಾಡಿ "ಎಲೈ ಕೋದಂಡಪಾಣಿಯಾದ ರಾಮನೇ! ಮಾರ್ತಾಂಡಚಂದ್ರಲೋಚನನೇ! ಬ್ರಹ್ಮಾಂಡನಾಯಕನೇ! ಗರುಡವಾಹನನೇ! ನಾನು ನಿನಗೆ ನಮಸ್ಕರಿಸುತ್ತೇನೆ. ಪ್ರತಿಷ್ಠೆಯಿಂದಲೂ ಮತ್ತು ಜನಗಳ ಹೊಗಳಿಕೆಗಾಗಿಯೂ ನಿನ್ನನ್ನು ನಂಬಿದ್ದೇನೆಯೇ? ನನ್ನ ಊರು ಮತ್ತು ಬೀದಿಯ ಜನರೆಲ್ಲರೂ ಒಂದೇ ರೀತಿಯ ಸ್ವಭಾವದರಲ್ಲ. ತ್ಯಾಗರಾಜನಾದ ನನ್ನ ಕೈಹಿಡಿದು ಸನ್ಮಾರ್ಗದಲ್ಲಿ ನನಗೆ ದಾರಿತೋರು" ಎಂದು ಶ್ರೀರಾಮನನ್ನು ಪ್ರಾರ್ಥಿಸಿದ್ದಾರೆ.

ಕೈಂಕರ್ಯ ಅಥವಾ ದಾಸ್ಯಭಕ್ತಿಯು ಏಳನೆಯ ವಿಧ. ಈ ಭಕ್ತಿಯ ಹಿರಿಮೆಯನ್ನು ಕುರಿತು ಪುರಂದರದಾಸರು "ಹರಿದಾಸರ ದಾಸತ್ವವ ಪಡೆದ। ನರಜೀವನ್ಮುಕ್ತನೆನಿಸಿ ಕೀರ್ತಿ ಪಡೆದ। ಹರಿ ನಾನೆಂಬವನೆದೆ ಮೆಟ್ಟಿ ನಡೆದ। ಹರಿಯ ಬಾಳಿಕೆಗೆ ವೃತ್ತಿಯನೆ ಹಿಡಿದ। ಪುರಂದರ ವಿಠಲ ರಾಯನ ಎಡದ। ಚರಣ ನಿರ್ಜರಕರು ಛಾಯೆಯ ಹಿಡಿದ॥" ಎಂದು ನವವಿಧ ಭಕ್ತಿ ಸುಳಾದಿಯಲ್ಲಿ ಹೇಳಿದ್ದಾರೆ. ದಾಸ್ಯಭಾವದ ನಿರೂಪಣೆಗಂತೂ ಇವರ ರಚನೆಗಳಲ್ಲಿ ಅಗ್ರಸ್ಥಾನ. ಭಕ್ತ ಆಂಜನೇಯನೇ ಈ ಭಾವದ ಪ್ರತೀಕ. ದಾಸರು ಭಗವಂತನ ದಾಸನಾಗುವುದಕ್ಕೆ ಎಷ್ಟು ಅಪೇಕ್ಷಿಸುತ್ತಾರೆಯೋ ಹಾಗೆಯೇ ದಾಸರ ದಾಸರಾಗುವುದರಲ್ಲಿ ಅನುರಕ್ತಿಯುಳ್ಳವರು. ದಾಸನಾಗಲು ಹಲವಾರು ಜನ್ಮಗಳ ಸುಕೃತವಿರಬೇಕೆಂದು ಈ ರೀತಿ ಹೇಳಿದ್ದಾರೆ

"ದಾಸನಾಗುವುದಕ್ಕೆ ಏ ಸುಜನ್ಮದ ಸುಕೃತ
ಭಾಸುರ ರವಿಕೋಟಿ ಶ್ರೀಶ ಗುಣವಂತ
ನಾಶರಹಿತ ನಿನ್ನ ದಾಸರ ದಾಸ್ಯ
ಲೇಸಾಗಿ ಕೊಡುಕಂಡ್ಯ ಪುರಂದರವಿಠಲ"

ಇದಲ್ಲದೆ 'ದಾಸನ ಮಾಡಿಕೊ ಎನ್ನ ಸ್ವಾಮಿ, ಸಾಸಿರನಾಮದ ವೆಂಕಟರಮಣ, ಇನ್ನೂ ದಯ ಬಾರದೇ, ದಾಸಶೇಷಾದ್ರಿಯ ವಾಸ ತಿಮ್ಮಪ್ಪನ, ನಿನ್ನ ದಾಸನಾಗಿ ನಿನ್ನೆಂಜಲವನುಂಡ' ಎಂಬ ರಚನೆಗಳಲ್ಲಿ ಮೊರೆಯಿಟ್ಟಿದ್ದಾರೆ. ಲಕ್ಷ್ಮಣ ಮತ್ತು ಆಂಜನೇಯರು ದಾಸ್ಯಭಕ್ತಿಗೆ ಆದರ್ಶ ಪುರುಷರು ಲಕ್ಷ್ಮಣೋ ಲಕ್ಷ್ಮೀಸಂಪನ್ನಃ— ಲಕ್ಷ್ಮಣನೆಂದರೆ ಕೈಂಕರ್ಯಲಕ್ಷ್ಮಿಯಿಂದ ಕೂಡಿರುವವನು. ರಾಮನ ಇಂಗಿತವನ್ನರಿತವನು. ರಾಮನ ಕಣ್ಣಿನ ಸನ್ನೆಯಿಂದಲೇ ಸೇವೆಗೆ ಸಿದ್ಧ. ಆಂಜನೇಯನಲ್ಲಿ ದಾಸ್ಯಭಕ್ತಿಯ ಪರಮಾವಧಿಯನ್ನು ಕಾಣಬಹುದು. ತ್ಯಾಗರಾಜರು ಲೇಕನಾ ನಿನ್ನು ಎಂಬ ಅಸಾವೇರಿರಾಗದ ಕೃತಿಯಲ್ಲಿ ಲಕ್ಷ್ಮಣನ ದಾಸ್ಯಭಕ್ತಿಯನ್ನೂ, ಪಾಹಿರಾಮದೂತ ಎಂಬ ವಸಂತವರಾಳಿರಾಗದ ಕೃತಿಯಲ್ಲಿ ಮತ್ತು ಕಲುಗುನ ಪದನೀರಜ ಎಂಬ ಪೂರ್ಣಲಲಿತರಾಗದ ಕೃತಿಯಲ್ಲೂ ಆಂಜನೇಯನ ದಾಸ್ಯಭಾವವನ್ನು ಸೂಚಿಸಿದ್ದಾರೆ. ಪಾಹಿ ರಾಮದೂತ ಎಂಬ ಕೃತಿಯಲ್ಲಿ ಆಂಜನೇಯನ ಗುಣಗಾನ ಮಾಡಿದ್ದಾರೆ. ಈ ಕೃತಿಯು ತ್ಯಾಗರಾಜರ ಅಗಾಧವಾದ ಸಂಸ್ಕೃತ ಪಾಂಡಿತ್ಯವನ್ನು ತೋರಿಸುತ್ತದೆ. ಬಂಟುರೀತಿ ಎಂಬ ಹಂಸನಾದ ರಾಗದ ಕೃತಿ ಮತ್ತು ಚಿಂತನೇ ಸದಾ ಎಂಬ ಕುಂತಲ ವರಾಳಿ ರಾಗದ ಕೃತಿಯಲ್ಲಿ ಯಾವ ಯಾವ ರೀತಿಯಲ್ಲಿ ತಾವು ರಾಮನ ದಾಸನಾಗಿ ಸೇವೆಯನ್ನು ಮಾಡಬೇಕು ಎಂಬ ಹಂಬಲವನ್ನು ತೋಡಿಕೊಂಡಿದ್ದಾರೆ. ತಮ್ಮನ್ನೂ ಆಂಜನೇಯ ಮತ್ತು ಭರತರಂತೆ

(35ನೇ ಪುಟ ನೋಡಿ)

# ಯೋಗ ಸೂತ್ರಗಳು

ಲೋಕ ಪ್ರಸಿದ್ಧವಾದ ಗ್ರಂಥಗಳ ಮೂಲಕ ಅಜರವೂ ಅಮರವೂ ಆದ ಕೀರ್ತಿಯನ್ನು ಪಡೆದು, ಜಗತ್ತಿನ ಕ್ಷೇಮಕ್ಕಾಗಿ ತಮ್ಮ ಅಮೂಲ್ಯ ಚಿನ್ತನ ಧಾರೆಯನ್ನು ಕೊಟ್ಟು ಹೋಗಿರುವ ಮಹಾನ್ ವ್ಯಕ್ತಿಗಳ ಪುಣ್ಯ ಇತಿಹಾಸ, ಯಾರಿಗಾದರೂ, ಎಂದೇ ಆದರೂ ಸ್ಫೂರ್ತಿ ಪ್ರದಾನ ಮಾಡುತ್ತದೆಂಬುದರಲ್ಲಿ ಸಂದೇಹವಿಲ್ಲ, ಭಾರತೀಯ ಇತಿಹಾಸದಲ್ಲಂತೂ ಇಂತಹ ಮೇಧಾವಿಗಳ ಕವಿಗಳ, ಪಂಡಿತರ, ಶಾಸ್ತ್ರಕಾರ, ಪರಂಪರೆ, ದಿವಿಜ ನದೀಧಾರೆಯಂತೆ ಶೋಭಿಸುತ್ತಿದೆ. ಈ ಸಾಲಿನಲ್ಲಿ ಲೋಕ ಪ್ರಸಿದ್ಧ ವ್ಯಕ್ತಿಯಾದ, ಷಡ್ದರ್ಶನಕಾರರಲ್ಲಿ ಒಬ್ಬನೆಂದು ಗೌರವಾನ್ವಿತನಾಗಿರುವ, ಮಹನೀಯ ಪತಂಜಲಿ

ಸಂಗವಂಶದ ಚಕ್ರೇಶ್ವರರಾದ ಪುಷ್ಯಮಿತ್ರ ಸಂಗ, ಅಗ್ನಿಮಿತ್ರ ಸಂಗ ಮುಂತಾದವರು ನಡೆಸಿದ ಅಶ್ವಮೇಧ ಯಜ್ಞದಲ್ಲಿ ಪತಂಜಲಿ ಸಕ್ರಿಯವಾಗಿ ಭಾಗವಹಿಸಿದ್ದನು. ಗ್ರೀಕ್ ಜನಾಂಗದ ಮಹಾಮೇಧಾವಿಗಳು, ಅಯೋಧ್ಯಾನಗರದಲ್ಲಿ ನೆಲೆಸಿ ತಮ್ಮ ಮನ ಮೆಚ್ಚಿದ ಬೌದ್ಧಮತವನ್ನು ಸಹರ್ಷವಾಗಿ ಸ್ವೀಕರಿಸಿದ ಮಹಾನ್ ವೈಭವವನ್ನೂ, ವೈದುಷ್ಯವನ್ನೂ ಕಂಡಿದ್ದವನು ಪತಂಜಲಿ. "ನ ಭೂತೋ ನ ಭವಿಷ್ಯತಿ"– ಎಂಬಂತಹ ವಿಖ್ಯಾತ ವ್ಯಾಕರಣ ಗ್ರಂಥ ಪಾಣಿನಿಯ "ಅಷ್ಟಾಧ್ಯಾಯಿ". ಈ ಗ್ರಂಥರತ್ನಕ್ಕೆ ಮಹಾಭಾಷ್ಯವನ್ನು ರಚಿಸಿದ ಪ್ರಕಾಂಡ ಪಂಡಿತ. ಇವೆಲ್ಲಕ್ಕಿಂತ ಹೆಚ್ಚಾಗಿ ಪತಂಜಲಿ ಎಂದ ಕೂಡಲೇ ನೆನಪಾಗುವುದು ಯೋಗ ಸೂತ್ರಗಳು. ಈ ಮಹನೀಯ, ಸುಮಾರು ಕ್ರಿ. ಪೂ. 140 ರಲ್ಲಿ ಇದ್ದವನೆಂದು ಹಲವು ಸಂಶೋಧಕರ ಅಭಿಪ್ರಾಯ.

ಪತಂಜಲಿಯ ಯೋಗ ಸೂತ್ರಗಳು, ಕಪಿಲರ ಸಾಂಖ್ಯ ದರ್ಶನಕ್ಕೆ ಪೂರಕವಾಗಿವೆಯೆಂಬ ಅಂಶವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈ ಯೋಗ ಸೂತ್ರಗಳಿಗೆ ಬರೆಯಲಾಗಿರುವ ಭಾಷ್ಯಗಳಲ್ಲಿ ಅತ್ಯಂತ ಪ್ರಾಚೀನವೂ, ಮಹತ್ವಪೂರ್ಣವೂ ಆದದ್ದು "ವ್ಯಾಸ ಭಾಷ್ಯ". ಈ ಭಾಷ್ಯ ಗ್ರಂಥದ ಪ್ರತಿ ಅಧ್ಯಾಯದ ಕೊನೆಯಲ್ಲಿ "ಸಾಂಖ್ಯೇ ಪ್ರವಚನೇ"–ಎಂಬ ಮಾತಿರುವುದನ್ನು ಗಮನಿಸಿದಾಗ ಮೇಲಿನ ಅಭಿಪ್ರಾಯಕ್ಕೆ ಪುಷ್ಟಿ ದೊರೆಯುತ್ತದೆ.

ಸಾಂಖ್ಯದರ್ಶನಕಾರನಾದ ಕಪಿಲ, ಸುಮಾರು ಕ್ರಿ ಪೂ 9 ಅಥವಾ 10ನೇ ಶತಮಾನಕ್ಕೆ ಸಂಬಂಧಿಸಿದವನು. ನ್ಯಾಯ ದರ್ಶನಕಾರ ಗೌತಮ, ವೈಶೇಷಿಕ ದರ್ಶನಕಾರ ಕಣಾದರು ಕಪಿಲನ ಸಮಕಾಲೀನರಾಗಿದ್ದಿರಬಹುದೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕ್ರಮಬದ್ಧಗೊಳಿಸಲ್ಪಟ್ಟ ಷಡ್ದರ್ಶನಗಳಲ್ಲಿ, ಯೋಗದರ್ಶನವೇ ಬಹುಶಃ ಅತ್ಯಂತ ಕೊನೆಯದು. ಪ್ರಸಿದ್ಧ ನಾಟಕಕಾರನಾದ ಭಾಸ ತನ್ನ ರಚನೆಯೊಂದರಲ್ಲಿ "ಮಹೇಶ್ವರಯೋಗ"– ಮಾತನ್ನು ಬಳಸಿದ್ದಾನೆ, ಪತಂಜಲಿಯ ಯೋಗ ಸೂತ್ರವನ್ನೇ ಆತ ಈ ಹೆಸರಿನಿಂದ ಕರೆದನೇ – ಇದರ ಬಗ್ಗೆ ಪಂಡಿತ ಮಂಡಲಿಯಲ್ಲಿ ಭಾರೀ ಚರ್ಚೆಗಳು ನಡೆದಿವೆ. ಜೈಗೀಶವ್ಯ, ಪಂಚಶಿಖ ಮುಂತಾದವರು ಪತಂಜಲಿಗಿಂತಲೂ ಹಿಂದೆ ಈ ಬಗ್ಗೆ ಗ್ರಂಥ ರಚನೆ ಮಾಡಿದ್ದರೆಂಬುದಕ್ಕೆ ಸಾಕಷ್ಟು ಆಧಾರಗಳಿವೆ.

ಪಂಚಮವೇದವೆಂದು ಪ್ರಖ್ಯಾತವಾಗಿರುವ ಮಹಾಭಾರತದ ಭೀಷ್ಮ ಪರ್ವದಲ್ಲಿರುವ, ಪ್ರಸ್ಥಾನತ್ರಯಗಳಲ್ಲೊಂದೆಂದು ಕೀರ್ತಿತವಾಗಿರುವ "ಭಗವದ್ಗೀತೆ"ಯನ್ನು ಯೋಗಶಾಸ್ತ್ರವೆಂದು ಕರೆಯಲಾಗಿದೆ. ಶರೀರ ವಿಜ್ಞಾನಕ್ಕೂ ಮನೋವಿಜ್ಞಾನಕ್ಕೂ ಯೋಗ ಸೂತ್ರಗಳಿಗೂ ಸಂಬಂಧವಿದೆ. ಪತಂಜಲಿಯ ಯೋಗ ಸೂತ್ರಗಳು ನಾಲ್ಕು ಪಾದಗಳಲ್ಲಿ (ಅಧ್ಯಾಯ) ವಿವರಿಸಲ್ಪಟ್ಟಿವೆ. 1ನೇ ಪಾದದಲ್ಲಿ 51, 2ನೇ ಪಾದದಲ್ಲಿ 55, 3ನೇ ಪಾದದಲ್ಲಿ 54, 4ನೇ ಪಾದದಲ್ಲಿ 34... ಹೀಗೆ ಒಟ್ಟು 194 ಯೋಗ ಸೂತ್ರಗಳಿವೆ, ಕೆಲವು ಸೂತ್ರಗಳಲ್ಲಿ ಕರ್ಮ ಸಿದ್ಧಾಂತದ ಬಗ್ಗೆ ಉಲ್ಲೇಖವಿದೆ. ಅತ್ಯಂತ ಆಧುನಿಕವಾದ ಕೆಲವು ವೈಜ್ಞಾನಿಕ ಸಂಶೋಧನೆಗಳ ಬಗ್ಗೆಯೂ ಸಹ ಕೆಲವು ಸೂತ್ರಗಳಲ್ಲಿ ಪ್ರಸ್ತಾಪ ಬಂದಿರುವುದು, ವೈಶಿಷ್ಟ್ಯಪೂರ್ಣವಾದ ಸಂಗತಿಯಾಗಿದೆ. ರೇಡಿಯೋ ಆಕ್ಟಿವಿಟಿ, ಟೆಲಿವಿಷನ್, ವಾಯುಯಾನ ಲೋಕೋಮೋಷನ್ ನೌಕಾವಿಜ್ಞಾನ ಇತ್ಯಾದಿಗಳೇ ಅಲ್ಲದೆ, ಬೆಂಕಿಯ ಮೇಲೆ, ನೀರಿನ ಮೇಲೆ ಸುಕ್ಷೇಮವಾಗಿ ನಡೆಯುವಿಕೆ, ಮೃತ ಜೀವಾಣುಗಳಿಗೆ ಪುನಶ್ಚೇತನ ನೀಡುವಿಕೆ ಇತ್ಯಾದಿ ಸೋಜಿಗದ ಸಂಗತಿಗಳಮೇಲೆ ಬೆಳಕು ಚೆಲ್ಲುವ "ಸಿದ್ಧಿಯೋಗ" – ಎಂಬ 3ನೇ ಅಧ್ಯಾಯ, ಮೈನವಿರೇಳಿಸುವಂತಹ ಸಂಗತಿಗಳಿಂದ ಕೂಡಿದೆ. ಇದು ಕೇವಲ ಸಾರ್ಥಕ ಕಲ್ಪನೆಯೆಂದು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲವೆಂಬಷ್ಟು ವೈಜ್ಞಾನಿಕವಾಗಿದೆ ಪತಂಜಲಿಯ ಅಭಿಪ್ರಾಯಗಳು.

ಯೋಗ ಸೂತ್ರಗಳಿಗೆ ವ್ಯಾಸಭಾಷ್ಯವೆಂಬ ಪ್ರಾಚೀನ ಭಾಷ್ಯವಿದೆ ಎಂದಾಗ ಅದರ ಲೇಖಕರು ಮಹಾಭಾರತ ರಚಿಸಿದ ವ್ಯಾಸರೇ? – ಎಂಬುದು ಸಂದೇಹಾಸ್ಪದ ಸಂಗತಿ ಈ ವ್ಯಾಸಭಾಷ್ಯಕ್ಕೆ ಕ್ರಿ. ಶ. 10ನೇ ಶತಮಾನದ ವಾಚಸ್ಪತಿ ಮಿಶ್ರ ಭಾಷ್ಯ ರಚಿಸಿದ್ದಾನೆ, ಭೋಜರಾಜನೆಂಬಾತ "ರಾಜಮಾರ್ತಾಂಡ"–ವೆಂಬ ಭಾಷ್ಯ ಬರೆದಿದ್ದಾನೆ. ನಾರಾಯಣ, ರಾಮಾನಂದ, ವಿಜ್ಞಾನಭಿಕ್ಷು, ಭಾವಗಣೇಶ, ನಾಗೇಶಭಟ್ಟ, ಸದಾಶಿವೇಂದ್ರ ಮುಂತಾದವರು ಯೋಗಸೂತ್ರಗಳಿಗೆ ಆಧುನಿಕ ಭಾಷ್ಯಕಾರರು. ಇಲ್ಲಿ ವಿಜ್ಞಾನಭಿಕ್ಷು ವಿಶೇಷ ಉಲ್ಲೇಖನೀಯ

**ವಿದ್ವಾನ್ ಬಿ. ನ. ಗುಂಡೂರಾವ್**

ಈತನು ಯೋಗದ ಬಗ್ಗೆ ತನ್ನದೇ ಆದ ಅಭಿಪ್ರಾಯಗಳನ್ನು ಸೂಚಿಸಿ "ಯೋಗ ಸಾರಸಂಗ್ರಹ' ವೆಂಬ ಉದ್ಗ್ರಂಥ ಬರೆದಿದ್ದಾನೆ. "ಯೋಗವಾರ್ತಿಕ" – ಈತನು ಪತಂಜಲಿಯ ಯೋಗಸೂತ್ರಗಳಿಗೆ ರಚಿಸಿದ ಭಾಷ್ಯಗ್ರಂಥ.

ಷಡ್ದರ್ಶನಗಳಲ್ಲಿ ಯೋಗದರ್ಶನವು ಅತ್ಯಂತ ಮನೋಜ್ಞವಾದದ್ದು. ಏಕೆಂದರೆ– ಇಲ್ಲಿ ದೇಹ, ಮನಸ್ಸು, ಬುದ್ಧಿ–ಚಿತ್ತ–ಅಹಂಕಾರ ಆತ್ಮ–ಜೀವ ಇತ್ಯಾದಿಗಳ ಬಗ್ಗೆ ಶುದ್ಧವೇದಾಂತ ಗ್ರಂಥಗಳಲ್ಲಿ ಅಥವಾ ಇತರೆ ದರ್ಶನ ಗ್ರಂಥಗಳಲ್ಲಿ ಇರುವಷ್ಟು ಸಿಕ್ಕಾದ ಅಭಿಪ್ರಾಯಗಳಿಲ್ಲ. ಚಿತ್ತೈಕಾಗ್ರತೆ, ಮನೋನಿಗ್ರಹ ಮುಂತಾದುವುಗಳ ವಿಷಯದಲ್ಲೂ ಸಹ. ಅತಿಸರ್ವತ್ರವರ್ಜಯೇತ್ – ಎಂಬ ನ್ಯಾಯದಂತೆ ಸಂಯಮಕ್ಕೆ ವಿಶೇಷ ಮಹತ್ವ ಕೊಟ್ಟು, ಪತಂಜಲಿ ತನ್ನ ಸೂತ್ರಗಳನ್ನು ರಚಿಸಿದ್ದಾನೆ. ಆದ್ದರಿಂದಲೇ ಯೋಗಸೂತ್ರಗಳು ಸಮಗ್ರಜಗತ್ತಿನ ವ್ಯಾಪ್ತಿಹಾಗೂ ಪ್ರಖ್ಯಾತಿ ಪಡೆದಿರುವುದು.

ಚಿತ್ತವೃತ್ತಿ ನಿರೋಧವೇ ಯೋಗ. ಪ್ರಮಾಣ, ನಿದ್ರೆ, ವಿಪರ್ಯಾಯ, ವಿಕಲ್ಪ ಸ್ಮೃತಿ ಇವು ಪ್ರಮುಖ ಚಿತ್ತವೃತ್ತಿಗಳು. ಇವು ಜಗದ್ವ್ಯಾಪಾರ ಪ್ರಚೋದಕ ಸಾಮಗ್ರಿಗಳು. ಅಭ್ಯಾಸ ಮತ್ತು ವೈರಾಗ್ಯದಿಂದ ಚಿತ್ತವೃತ್ತಿನಿರೋಧ ಕ್ರಮೇಣ ಸಾಧ್ಯವಾಗುತ್ತದೆ. ಜ್ಞಾನಯೋಗ, ಕ್ರಿಯಾಯೋಗ ಎಂದು ಎರಡು ಪ್ರಮುಖ ವಿಭಾಗಗಳಿವೆ. ಚರ್ಚೆಯು ವಿವೇಚನಾ ಶಕ್ತಿಯನ್ನು ಪ್ರಚೋದಿಸುತ್ತದೆ; ಧ್ಯಾನವನ್ನು ಅಭ್ಯಾಸಗೊಳಿಸುತ್ತದೆ. ಧ್ಯಾನವು ಜ್ಞಾನಬೋಧಕ ಜ್ಞಾನವು ಕೈವಲ್ಯದಾಯಕ; ಪ್ರಣವವೇ ಈಶ್ವರಸ್ವರೂಪ. ನಿಶ್ಚಿತ ವಸ್ತು ಅಥವಾ ತತ್ತ್ವದ ಬಗ್ಗೆ ದೀರ್ಘ ಕಾಲೀನ ಏಕಾಗ್ರತೆ ಅತ್ಯಗತ್ಯ. ಚಿತ್ತೈಕಾಗ್ರತೆಗೆ ಪತ್ನಂಗದ ನೆರವು ಮುಖ್ಯ.

ಪ್ರಾಣಾಯಾಮದಲ್ಲಿ ರೇಚಕ, ಪೂರಕ, ಕುಂಭಕವೆಂದು ಮೂರು ಹಂತಗಳಿವೆ. ಇಂದ್ರಿಯಗಳ ಮೇಲೆ ಹತೋಟಿ ಇರಲಿ ಮತ್ತು ಆ ಹತೋಟಿ ಜಾಗ್ರತ್, ಸ್ವಪ್ನ, ಸುಷುಪ್ತಿ – ಮೂರು ಸಂದರ್ಭಗಳಲ್ಲಿ ಅತ್ಯಗತ್ಯ. ನಿರ್ವಿಚಾರ ಅಥವ ನಿರ್ವಿತರ್ಕ ಸ್ಥಿತಿಗೆ ಋತಂಭರಾ ಎಂದೂ ಹೆಸರಿದೆ. ಈ ಋತಂಭರಾ ಸ್ಥಿತಿಯು ಬಲಿತ ರೂಪವೇ ನಿರ್ವಿಕಲ್ಪ ಸಮಾಧಿ ... ........ಇತ್ಯಾದಿ ವಿಷಯಗಳ ಬಗ್ಗೆ – ಯೋಗಪಾದ–ಎಂಬ ಪ್ರಥಮಾಧ್ಯಾಯದಲ್ಲಿ ವಿಶದ ವಿವರಣೆಗಳಿವೆ.

ಸಾಧನ ಪಾದ–ವೆಂಬ ಎರಡನೇ ಅಧ್ಯಾಯದಲ್ಲಿ ಕ್ರಿಯಾಯೋಗದ ಬಗ್ಗೆ ವಿವರಗಳಿವೆ, ತಪಸ್ಸು, ಸ್ವಾಧ್ಯಾಯ – ಈಶ್ವರ ಪ್ರಣಿಧಾನ ಇವು ಕ್ರಿಯಾಯೋಗದ ಆಧಾರ ಸ್ತಂಭಗಳು. ಈ ಅಧ್ಯಾಯದ 27ನೇ ಸೂತ್ರದಲ್ಲಿ ಅಜ್ಞಾನ ನಿವಾರಣೆಗೆ ಏಳು ಹಂತಗಳಿವೆ ಎಂಬ ಬಗ್ಗೆ ವಿವರಣೆ ಕೊಡುತ್ತದೆ. ಯಮ. ನಿಯಮ, ಆಸನ. ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ–ಸಮಾಧಿ ಇವು ಯೋಗದ ಅಷ್ಟ ಅಂಗಗಳು. ಜ್ಞಾನ ಪ್ರಾಪ್ತಿಗೆ ಇವು ಅಗತ್ಯ. ಸ್ಥಿರ ಸುಖಮಾಸನಂ – ಎಂಬ ಶ್ಲೋಕ ಪ್ರಸಿದ್ಧ ಸೂತ್ರ ಈ ಅಧ್ಯಾಯದಲ್ಲಿದೆ. 49 ರಿಂದ 53ನೇ ಸೂತ್ರದವರೆಗೆ ಪ್ರಾಣಾಯಾಮ ತತ್ತ್ವದ ಬಗ್ಗೆವಿಪುಲ ವಿವರಣೆ ಇದೆ.

ಮೂರನೆಯ ಅಧ್ಯಾಯ ಸಿದ್ಧಿಪಾದ ಅಥವ ವಿಭೂತಿಪಾದ. ಸಾಧನಾಮಾರ್ಗದಲ್ಲಿ ಸಂಯಮದ ಸ್ಥಾನವು ಅತ್ಯಂತ ಮಹತ್ವದ್ದು. ಅತೀಂದ್ರಿಯ ಮಹಾಸಿದ್ಧಿಗಳ ಉಗಮ ಸ್ಥಾನವೇ ಸಂಯಮ. ವಿವಿಧ ಭಾಷೆಗಳ ಪರಿಪೂರ್ಣ ಜ್ಞಾನ, ಪ್ರಾಣಿ–ಪಕ್ಷಿ–ಕ್ರಿಮಿಕೀಟಾದಿಗಳ ಭಾಷೆ – ಇತರರ ಮನೋಗತವನ್ನರಿಯುವಿಕೆ, ಅಗೋಚರವಾಗುವಿಕೆ, ಅಗೋಚರವಾಗಿಸುವಿಕೆ, ಮಾತಿನ ಮೋಡಿಯಿಂದ ಪ್ರಜ್ಞೆ ತಪ್ಪಿಸುವಿಕೆ, ಈ ಶಕ್ತಿಗಳನ್ನು ತಾನು ಪಡೆಯುವುದು ಮಾತ್ರವಲ್ಲದೆ ಇತರರಿಗೂ ಕೊಡುವಿಕೆ; ಸಿಂಹಸದೃಶ ಶಕ್ತಿಯನ್ನು ಪಡೆಯುವಿಕೆ (ಸೂತ್ರ 25) ಭೂಗರ್ಭದಲ್ಲಡಗಿರುವ ನಿಧಿನಿಕ್ಷೇಪಗಳನ್ನು ಪತ್ತೆಹಚ್ಚುವುದು, ಅಖಂಡ ಜಲಸ್ರೋತವೆಲ್ಲಿದೆಯೆಂದು ಗುರುತಿಸುವುದು, (ಸೂತ್ರ 26) ದೂರದರ್ಶನ ಸಾಮರ್ಥ್ಯ, ಸಾಕ್ಷಾತಿಸೂಕ್ಷ್ಮ ವಸ್ತುವನ್ನು ನೋಡಿ ಖಚಿತವಾಗಿ ಗುರುತು ಹಿಡಿಯುವ ದೃಷ್ಟಿಪಾಟವ ಗಗನ ವಿಜ್ಞಾನ, ವ್ಯೋಮಮಂಡಲ ಪರಿಭ್ರಮಣ ಸಾಮರ್ಥ್ಯ ಪ್ರಾಪ್ತಿ; (ಸೂತ್ರ 53) ಹಸಿವು ಬಾಯಾರಿಕೆ ಬಳಲಿಕೆಗಳನ್ನು ಶಾಶ್ವತವಾಗಿ ಪರಿಹರಿಸುವಿಕೆ, ಮೃತವ್ಯಕ್ತಿಗಳ ಪುನರ್ದರ್ಶನ ಸಾಮರ್ಥ್ಯವನ್ನು ಗಳಿಸಿಕೊಳ್ಳುವಿಕೆ, ಮತ್ತು ಅವರೊಡನೆ ಮಾತಾಡಬಹುದೆಂಬ ಅಂಶ, ಪರಕಾಯ ಪ್ರವೇಶ ವಿಜ್ಞಾನ, ಏಕ ಕಾಲದಲ್ಲಿ ಅನೇಕಸ್ಥಳಗಳಲ್ಲಿ ಸಂಚರಿಸುವಿಕೆ ......... . ಇತ್ಯಾದಿ ಸಿದ್ಧಿಗಳನ್ನೆಲ್ಲ ಹೇಗೆ ಪಡೆಯಬಹುದೆಂಬುದರ ಬಗ್ಗೆ ಈ ಅಧ್ಯಾಯ ಬೆಳಕು ಚೆಲ್ಲುತ್ತದೆ. ಆದರೆ ಅಣಿಮಾದಿ ಅಷ್ಟಸಿದ್ಧಿಗಳೆಲ್ಲ ಕೈವಲ್ಯ ಪ್ರಾಪ್ತಿಗೆ ಅಡ್ಡಿಯಾದಾವು ಎಂಬ ಎಚ್ಚರಿಕೆಯನ್ನು ಪತಂಜಲಿ ಇಲ್ಲಿ ಸೂಚಿಸಿದ್ದಾನೆ. ಈ ಸಿದ್ಧಿಗಳಿಂದ ವ್ಯಕ್ತಿ ಪ್ರಸಿದ್ಧನಾಗಬಹುದು, ಹೆಸರು ಗಳಿಸಬಹುದು, ಲೌಕಿಕ ಸೌಕರ್ಯಗಳನ್ನು ಹೊಂದಬಹುದು. ಆದರೆ ಕೈವಲ್ಯ ಪ್ರಾಪ್ತಿ ಎಲ್ಲಕ್ಕಿಂತ ದೊಡ್ಡದು.

ಕೈವಲ್ಯಪಾದ ಪತಂಜಲಿಯ ಗ್ರಂಥದಲ್ಲಿ ಅಂತಿಮ ಅಧ್ಯಾಯ. ಜೀವ – ಬ್ರಹ್ಮ ಇತ್ಯಾದಿ ನಿಗೂಢ ತತ್ತ್ವಗಳ ಬಗ್ಗೆ ಉಲ್ಲೇಖ ಇಲ್ಲಿನ ಪ್ರಧಾನ ವಸ್ತು. ಸುಖದುಃಖಾದಿ ದ್ವಂದ್ವಗಳೆಲ್ಲ ಕರ್ಮ ಅಥವ ಕರ್ಮವಾಸನಾ ಫಲವೆಂದು ಈತನ ಅಭಿಪ್ರಾಯ.

ಇದು ಪತಂಜಲಿಯ ಯೋಗ ಸೂತ್ರಗಳ ಸ್ಥೂಲ ಪರಿಚಯ. ಯೋಗಸೂತ್ರಗಳ ಉಪಯೋಗ ಅಧ್ಯಯನದಲ್ಲಿಲ್ಲ ; ಅಭ್ಯಾಸದಲ್ಲಿ – ಎಂಬುದು ಗಮನಿಸಬೇಕಾದ ಅಂಶ. ಆದ್ದರಿಂದಲೇ ಇರಬೇಕು. ಯೋಗೀಶ್ವರನಾದ ಕೃಷ್ಣ, ಗೀತೆಯಲ್ಲಿ "ತಸ್ಮಾದ್ಯೋಗೀ ಭವ–ಅರ್ಜುನ" – ಎಂದಿದ್ದಾನೆ. ಇಂತಹ ಸರ್ವಸಿದ್ಧಿ ಪ್ರದಾಯಕ, ಆರೋಗ್ಯದಾಯಕ, ಜ್ಞಾನ ಕೈವಲ್ಯ ಕಾರಕವಾದ ಅಮೂಲ್ಯ ವಿಚಾರರತ್ನಗರ್ಭಿತವಾದ ಪತಂಜಲಿಯ ಯೋಗ ಸೂತ್ರಗಳು ಜಗತ್ತಿಗೊಂದು ಅಮೂಲ್ಯ ಕೊಡುಗೆ ಎಂಬುದು ನಿರ್ವಿವಾದ. ಯೋಗದಿಂದ ಸಾಧಿಸಲಾಗದ್ದು ಜಗತ್ತಿನಲ್ಲಿ ಯಾವುದೂ ಇಲ್ಲವೆಂಬ ಮಾತು ಪೂರ್ಣಸತ್ಯ.

# ಶ್ರೀ ಕೃಷ್ಣ ಭಕ್ತಿ

ಶ್ರೀ ಕೆ. ರಮಾನಂದ ಎಂ.ಎ.

ಭಾರತೀಯರ ಆರಾಧ್ಯದೈವವಾದ ಶ್ರೀ ಕೃಷ್ಣನ ಉಪಾಸನೆ ಪ್ರಾಚೀನ ಕಾಲದಿಂದಲೂ ಇದೆ. ವಿಷ್ಣುವಿನ ಅವತಾರವೆಂದು ಪರಿಗಣಿಸಲ್ಪಡುವ ಶ್ರೀರಾಮನನ್ನು ಕುರಿತಂತೆ, ಭಕ್ತಿ ಪರಂಪರೆಯಲ್ಲಿ ಅನೇಕ ಕೃತಿಗಳು ಮೂಡಿಬಂದಿರುವಂತೆ ವಿಷ್ಣುವಿನ ಮತ್ತೊಂದು ಅವತಾರವಾದ ಶ್ರೀ ಕೃಷ್ಣನ ಬಗೆಗೂ ವಿಪುಲವಾದ ಸಾಹಿತ್ಯರಾಶಿ ನಿರ್ಮಿತವಾಗಿದೆ. ಕೃಷ್ಣಭಕ್ತರಾದ, ಕೃಷ್ಣೋಪಾಸನೆಯನ್ನು ಮಾಡಿದ, ಕೃಷ್ಣನನ್ನು ಕುರಿತಂತೆ ಕೃತಿಗಳನ್ನು ರಚಿಸಿದ ಕೆಲವು ಕೃಷ್ಣಭಕ್ತ ಕವಿಗಳ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.

ಕೃಷ್ಣಭಕ್ತಿ ಪರಂಪರೆಯಲ್ಲಿ ರಾಧಾ–ಕೃಷ್ಣರ ಆರಾಧನೆ ಹೆಚ್ಚಾಗಿ ನಡೆಯಿತು. ರಾಧಾ–ಕೃಷ್ಣರನ್ನು ಆರಾಧಿಸುವ ವಿಧಾನಕ್ಕೆ 'ಮಧುರಭಾವ' ವೆಂಬ ಹೆಸರೂ ಇದೆ. ಹಾಗೆ ನೋಡಿದರೆ ರಾಧೆಯ ಉಲ್ಲೇಖ ಹರಿವಂಶ, ವಿಷ್ಣು ಪುರಾಣ, ಭಾಗವತ ಪುರಾಣಗಳಲ್ಲಿ ಇಲ್ಲವೇ ಇಲ್ಲ. ಭಗವಂತನಾದ ಕೃಷ್ಣನ ಪ್ರೇಯಸಿಯೆಂದು ರಾಧೆ ಪ್ರಸಿದ್ಧಳಾಗಿದ್ದಾಳೆ. ರಾಧೆಯ ಹೆಸರಿಲ್ಲದಿದ್ದರೂ ಭಾಗವತದಲ್ಲಿ–ಇತರ ಗೋಪಿಕಾ ಸ್ತ್ರೀಯರಲ್ಲಿ ಪ್ರಧಾನಳಾದ, ಕೃಷ್ಣನಲ್ಲಿ ಗಾಢವಾಗಿ ಅನುರಕ್ತಳಾದ ಗೋಪಿಯೊಬ್ಬಳ ವಿಚಾರವಿದೆ. ದಕ್ಷಿಣ ಭಾರತದಲ್ಲಿ ದೊರೆತ ಸಾಹಿತ್ಯದಲ್ಲಿಯೂ ರಾಧೆಯ ಉಲ್ಲೇಖವಿದೆ ಎಂಬ ಅಭಿಪ್ರಾಯವಾಗಿದೆ. ಆದರೆ ರಾಧೆಯನ್ನು ಉತ್ತರಭಾರತದ ಸಂತಕವಿಗಳು ವರ್ಣಿಸಿರುವುದು ಹೆಚ್ಚು ಹೃದಯಂಗಮವಾಗಿದೆ. ರಾಧೆಯ ಹೆಸರಿನ ಪ್ರಥಮ ಉಲ್ಲೇಖ 'ಗೋಪಾಲ ತಾಪನೀಉಪನಿಷತ್' ನಲ್ಲಿ ದೊರೆಯುತ್ತದೆ. ಇದರಲ್ಲಿ ರಾಧೆ ಕೃಷ್ಣನ ಪ್ರೇಯಸಿ. ಶ್ರೀಕೃಷ್ಣನ ಅನೇಕ ಸಾವಿರ ಮಂದಿ ಪ್ರೇಯಸಿಯರಲ್ಲಿ ರಾಧೆ ಮುಖ್ಯಳಾದವಳು. ರಾಧಾ ಮತ್ತು ಕೃಷ್ಣರನ್ನು ಸಮಾವೇಶಗೊಳಿಸಿ, ಅವರನ್ನು ಆರಾಧಿಸುವ ವಿಧಾನವನ್ನು ಹಾಕಿಕೊಟ್ಟವರು ನಿಂಬಾರ್ಕಾಚಾರ್ಯರು.

ನಿಂಬಾರ್ಕಾಚಾರ್ಯರ ಕಾಲವನ್ನು ಹನ್ನೆರಡನೆಯ ಶತಮಾನವೆಂದು ಗುರುತಿಸಲಾಗಿದೆ. ಬೃಂದಾವನದಲ್ಲಿ ನೆಲೆಸಿದ್ದ ನಿಂಬಾರ್ಕಾಚಾರ್ಯರು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನಗಳನ್ನು ಬರೆದವರೆಂಬ ಅಭಿಪ್ರಾಯವಿದೆ. 'ದ್ವೈತ ಅದ್ವೈತ' ಎಂಬ ಸಿದ್ಧಾಂತದ ಸ್ಥಾಪಕರೂ ನಿಂಬಾರ್ಕಾಚಾರ್ಯರೇ ಆಗಿದ್ದರಂತೆ! 'ದಶಶ್ಲೋಕಿ' ಎಂಬುದರಲ್ಲಿ ಈ ಸಿದ್ಧಾಂತವನ್ನು ನಿರೂಪಿಸುವ ಪ್ರಯತ್ನವನ್ನು ಮಾಡಿದ್ದಾರೆ ನಿಂಬಾರ್ಕರು. ನಿಂಬಾರ್ಕರ ಪ್ರಕಾರ ರಾಧಾ–ಕೃಷ್ಣರು, ಲಕ್ಷ್ಮೀ–ನಾರಾಯಣರ ಪ್ರತಿರೂಪವೇ ಆಗಿದ್ದಾರೆ. ಇಲ್ಲಿಯ ರಾಧೆ ಕೃಷ್ಣನ ಪ್ರೇಯಸಿ ಮಾತ್ರವಲ್ಲ, ಕೃಷ್ಣನನ್ನೇ ವಿವಾಹವಾದವಳು. ಹೀಗೆ ರಾಧೆಯ ಸ್ವರೂಪವನ್ನು ನಾರಾಯಣನ ಪತ್ನಿಯಾದ ಲಕ್ಷ್ಮಿಗೆ ಆರೋಪಿಸಿರುವುದನ್ನು ಇಲ್ಲಿ ಗಮನಿಸಬಹುದು. ಕೇವಲ ಕೃಷ್ಣನನ್ನು ಮಾತ್ರ ಆರಾಧನೆ ಮಾಡಿದರೆ ಸಾಲದು. ರಾಧಾ–ಕೃಷ್ಣರ ಆರಾಧನೆಯೇ ಸಾಧಕನೊಬ್ಬನಿಗೆ ಮೋಕ್ಷಪ್ರಾಪ್ತಿಯುಂಟಾಗುವಂತೆ ಮಾಡಲು ಕಾರಣೀಭೂತವಾಗುತ್ತದೆ. ನಿಂಬಾರ್ಕರ ಈ ಸಂಪ್ರದಾಯ ಅಂದರೆ ರಾಧಾ ಕೃಷ್ಣರನ್ನು ಆರಾಧ್ಯದೈವವನ್ನಾಗಿ ಮಾಡಿಕೊಂಡು ಕೀರ್ತನೆಗಳನ್ನೂ ಹಾಡುಗಳನ್ನೂ, ಭಜನೆಗಳನ್ನೂ ರಚಿಸುವ ಪರಿಪಾಠ ಮುಂದಿನ ಅನೇಕ ಸಂತಕವಿಗಳಲ್ಲಿ ಕಂಡುಬರುತ್ತದೆ. ರಾಧಾ ಕೃಷ್ಣರ ಸಂಗಮವನ್ನು ಕಾವ್ಯಮಯವಾಗಿ, ರಮಣೀಯವಾಗಿ ನಿರೂಪಿಸಿದವನು 'ಗೀತಗೋವಿಂದ'ದ ಕರ್ತೃವಾದ ಜಯದೇವ ಕವಿ.



ಜಯದೇವನ 'ಗೀತಗೋವಿಂದ' ಸಂಸ್ಕೃತ ಭಾಷೆಯಲ್ಲಿದೆ. ಗೀತಗೋವಿಂದದಲ್ಲಿ ರಾಧಾ–ಕೃಷ್ಣರ ಲೀಲೆಗಳ ರಸವತ್ತಾದ ವರ್ಣನೆಯಿದೆ. ಸಂಸ್ಕೃತ ಸಾಹಿತ್ಯಕ್ಕೆ ಜಯದೇವನ ಕೊಡುಗೆ ಕಾಲಕ್ಕೂ ನಿಲ್ಲುವಂತಹುದಾಗಿದೆ. ಸಂಸ್ಕೃತ ಭಾಷೆಯ ಮಾಧುರ್ಯ, ಸೊಗಸು, ನಾದಮಯವಾದ ಶೈಲಿ, ಮನಮೋಹಕವಾದ ವರ್ಣನೆಗಳಿಂದ ಕೂಡಿರುವ 'ಗೀತಗೋವಿಂದ' ಎಲ್ಲರ ಮನಸ್ಸನ್ನೂ ರಂಜಿಸುವುದಾಗಿದೆ. ಜಯದೇವ ರಾಧಾ–ಕೃಷ್ಣರನ್ನು ನಾಯಕ–ನಾಯಕಿಯರನ್ನಾಗಿ ಮಾಡಿಕೊಂಡು ಗೀತಗೋವಿಂದವನ್ನು ಬರೆದ. ಗೀತಗೋವಿಂದ ಕಥಾವಸ್ತುವಿಗೆ, ಮೂಲ ಆಕರ ಭಾಗವತವೆಂದೇ ಹೇಳಬಹುದು.

ಕೃಷ್ಣೋಪಾಸನೆ ಮಾಡಿದ ಕವಿಗಳಲ್ಲಿ, ಜಯದೇವಕವಿಯ ಉಲ್ಲೇಖ ಗಮನಾರ್ಹವಾದುದಾಗಿದೆ. ಜಯದೇವನ ಭಕ್ತಿ ನಿಷ್ಠೆಗಳೂ ಮೆಚ್ಚುವಂತಹುವೇ ಆಗಿವೆ. ಜಯದೇವನನ್ನು ಕುರಿತಂತೆ ಅನೇಕ ಪವಾಡಗಳೂ, ದಂತಕಥೆಗಳೂ ಇವೆ. ಮುಂದೆ ಬಂದ ಅನೇಕ ಕವಿಗಳಿಗೆ ಜಯದೇವನ 'ಗೀತಗೋವಿಂದ' ಆಕರ ಗ್ರಂಥವಾಗಿಯೂ, ರಾಧಾ–ಕೃಷ್ಣರ ವಿರಹವನ್ನು ವ್ಯಕ್ತಪಡಿಸಲು ತಳಹದಿ ಹಾಕಿಕೊಟ್ಟಂತಹ ಕೃತಿಯೂ ಆಯಿತು. ಮುಂದಿನ ಅನೇಕ ಶೃಂಗಾರ ಕವಿಗಳಷ್ಟೇ ಅಲ್ಲ; ಭಕ್ತಿ ಕವಿಗಳೂ ಗೀತಗೋವಿಂದದ ಸೊಬಗಿಗೆ ಮನಸೋತು ಅದರಂತೆಯೇ ತಾವೂ ಕಾವ್ಯಗಳನ್ನು ರಚಿಸಲು ತೊಡಗಿದ್ದರೂ ಸಹ, ಗೀತಗೋವಿಂದದ ಮಾಧುರ್ಯಮಯ ಸನ್ನಿವೇಶಗಳನ್ನು ಅಂತೆಯೇ ಮೂಡಿಸುವಲ್ಲಿ ಅವರುಗಳು ಅಸಮರ್ಥರೇ ಆದರು. ಸೊಬಗಿಗೆ, ನಾದ ಮಾಧುರ್ಯಕ್ಕೆ ಒಂದು ಉದಾಹರಣೆ.

ಲಲಿತ ಲವಂಗ ಲತಾ ಪರಿಶೀಲನ  
ಕೋಮಲ ಮಲಯ ಸಮೀರೇ ।  
ಮಧುಕರ ನಿಕರ ಕರಂಬಿತ  
ಕೋಕಿಲ ಕೂಜಿತ ಕುಂಜ ಕುಟೀರೇ ॥  
ವಿಹರತಿ ಹರಿರಿಹ ಸರಸ ಬಸಂತೇ ।  
ನೃತ್ಯತಿ ಯುವತಿ ಜನೇನ ಸಮಂ  
ಸಖಿ ವಿರಹಿಜನಸ್ಯ ದುರಂತೇ ॥  
ಉನ್ಮದ ಮದನ ಮನೋರಥ ಪಥಿಕ  
ವಧೂಜನ ಜನಿತ ವಿಲಾಪೇ ।  
ಅಲಿಕುಲ ಸಂಕುಲ ಕುಸುಮ ಸಮೂಹ  
ನಿರಾಕುಲ ಬಕುಲ ಕಲಾಪೇ ॥  
ಮೃಗಮದ ಸೌರಭ ರಭಸ ವಶಂವದ  
ನವದಲ ಮಾಲ ತಮಾಲೇ ।  
ಯುವಜನ ಹೃದಯ ವಿದಾರಣ  
ಮನಸಿಜ ನಖರುಚಿ ಕಿಂಶುಕಜಾಲೇ ॥

– ಇಂತಹ ಪ್ರಕೃತಿ ಸನ್ನಿವೇಶದ ನಡುವೆ ವಿರಹಿಣಿಯಾದ ರಾಧೆಯ ಸ್ಥಿತಿ ಏನಾಯಿತೆಂಬುದನ್ನು ಜಯದೇವ ಕವಿ ಮಧುರವಾದ ಶಬ್ದಗಳ ಮೂಲಕ ವ್ಯಕ್ತಪಡಿಸಿದ್ದಾನೆ. ಇಂತಹ ಅನೇಕ ಪದ್ಯಗಳು ಗೀತಗೋವಿಂದದಲ್ಲಿರುವ ಕಾರಣ [illegible]

ಗೋವಿಂದ' ಲೋಕಪ್ರಿಯವಾದ ಕೃತಿಯಾಗಿದೆಯೆನ್ನಬಹುದು.

ಸುಮಾರು ಹದಿಮೂರನೆಯ ಶತಮಾನದಲ್ಲಿ, ಬಿಲ್ವಮಂಗಲನೆಂಬ ಕೃಷ್ಣಭಕ್ತನಿದ್ದ ವಿಷಯ ತಿಳಿದುಬರುತ್ತದೆ. ಅವನ 'ಕೃಷ್ಣಕರ್ಣಾಮೃತ'ದಲ್ಲಿ ಬಾಲಕೃಷ್ಣನನ್ನು ಕುರಿತಂತೆ ರಚಿತವಾದ ಸುಂದರ ಪದ್ಯಗಳಿವೆ. ಬಿಲ್ವಮಂಗಲನಿಗೆ, ಬಾಲಕೃಷ್ಣನ ಮನೋಹರವಾದ ಮೂರ್ತಿಯ ಬಗ್ಗೆ ಮನವುಂಟಾಗುವಂತಾಗಲು ಹಾಗೂ ಬಾಲಕೃಷ್ಣನ ಲೀಲೆಗಳನ್ನು ರಮ್ಯವಾಗಿ ವರ್ಣಿಸಲು ಕಾರಣೀಭೂತಳಾದವಳು ಚಿಂತಾಮಣಿಯೆಂಬ ಸ್ತ್ರೀಯಂತೆ. ಇವರಿಬ್ಬರೂ ಕೃಷ್ಣಪರಮಾತ್ಮನ ಪಟ್ಟಣವಾದ ಬೃಂದಾವನದಲ್ಲಿ ಕೃಷ್ಣನ ದರ್ಶನವನ್ನು ಪಡೆದರೆಂಬ ಐತಿಹ್ಯವೂ ಇದೆ. ಬಿಲ್ವಮಂಗಲನ ಪದ್ಯಗಳಲ್ಲಿ ಭಕ್ತನೊಬ್ಬನ ಭಕ್ತಿಭಾವನೆ ವ್ಯಕ್ತಗೊಂಡಿದೆ. ಅಲ್ಲದೆ ಆರ್ತಹೃದಯದಿಂದ ಬಿಲ್ವಮಂಗಲನು ಕೃಷ್ಣನನ್ನು ಪ್ರಾರ್ಥಿಸಿರುವ ಪದ್ಯಗಳಂತೂ ಹೃದಯಂಗಮವಾಗಿವೆ. ಸಂಸ್ಕೃತ ಭಾಷೆಯಲ್ಲಿ ರಚಿತಗೊಂಡಿರುವ ಈ ಪದಗಳು ಸರಳವಾಗಿದ್ದು ಅರ್ಥಗರ್ಭಿತವಾಗಿವೆ.

ಹೇ ದೇವ ಹೇ ದಯಿತ ಹೇ ಜಗದೈಕಬಂಧೋ
ಹೇ ಕೃಷ್ಣ ಹೇ ಚಪಲ ಹೇ ಕರುಣೈಕ ಸಿಂಧೋ
ಹೇ ನಾಥ ಹೇ ರಮಣ ಹೇ ನಯನಾಭಿರಾಮ
ಹಾಹಾ ಕದಾನುಭವಿತಾಸಿ ಪದಂ
ದೃಶೋರ್ಮೇ ॥

– ನಿನ್ನ ಪಾದದರ್ಶನವನ್ನಾದರೂ ನನಗೆ ನೀಡು ಎಂದು ಆರ್ತಚಿತ್ತನಾಗಿ ಕೇಳಿಕೊಳ್ಳುವ ಬಿಲ್ವಮಂಗಲನು ಕೃಷ್ಣನನ್ನು ಬಗೆ ಬಗೆಯಾಗಿ ಸ್ತುತಿಸಿರುವುದುಂಟು.

ಗೋಧೂಳಿ ಧೂಸರಿತ
ಕೋಮಲ ಕುಂತಲಾಗ್ರಂ
ಗೋವರ್ಧನೋದ್ಧಾರಣ
ಕೇಳಿಕೃತಪ್ರಯಾಸಂ
ಗೋಪೀ ಜನಸ್ಯ ಕುಚ
ಕುಂಕುಮ ಮುದ್ರಿತಾಂಗಂ
ಗೋವಿಂದಯಿಂದುವದನಂ
ಶರಣಂ ಭಜಾಮಃ ॥

–ಇದೇ ವಿಧವಾದ ನಾನಾ ಪದ್ಯಗಳನ್ನೊಳಗೊಂಡಿರುವ "ಕೃಷ್ಣ ಕರ್ಣಾಮೃತ" ಕವಿಯ ಕೃಷ್ಣ ಭಕ್ತಿಯನ್ನು ಅಮರವಾಗಿಡುವಲ್ಲಿ ಸಫಲವಾದ ಕೃತಿಯಾಗಿದೆ.

ಈ ಕಾಲದ ವಿಷ್ಣುಸ್ವಾಮಿಯೂ ಸಹ ರಾಧಾಕೃಷ್ಣರ ಆರಾಧನೆ ಮಾಡಿದವರಾಗಿದ್ದರು. ಸಂತ ಜ್ಞಾನೇಶ್ವರರಿಗೆ ಗುರುವಾಗಿದ್ದ ವಿಷ್ಣುಸ್ವಾಮಿಗಳ ವಿಚಾರ ಹೆಚ್ಚು ತಿಳಿದು ಬಂದಿಲ್ಲವಾದರೂ ಅವರ ಕಾಲ ಸುಮಾರು ಹದಿಮೂರನೇ ಶತಮಾನವೆಂದು ಊಹಿಸಲಾಗಿದೆ.

ಭಗವದ್ಗೀತೆ, ಬ್ರಹ್ಮಸೂತ್ರಗಳು, ಭಾಗವತ ಪುರಾಣ ಇವುಗಳಿಗೆ ವ್ಯಾಖ್ಯಾನಗಳನ್ನು ವಿಷ್ಣುಸ್ವಾಮಿಯವರು ಬರೆದಿರಬಹುದೆಂಬ ಅಭಿಪ್ರಾಯವೂ ಇದೆ. ರಾಧಾ ಕೃಷ್ಣರ ಆರಾಧನೆಯಲ್ಲಿ ವಿಷ್ಣುಸ್ವಾಮಿಯ ಹೆಸರೂ ಮಹತ್ವ ಪೂರ್ಣವಾದುದಾಗಿದೆ.

ಚಂಡೀದಾಸನ ಹೆಸರೇ ಸೂಚಿಸುವಂತೆ, ಆತ ಆರಂಭದಲ್ಲಿ ಮಹಾಶಕ್ತಿಯ ಆರಾಧಕನಾಗಿದ್ದ. ಶಕ್ತಿಯ ಆರಾಧನೆಯನ್ನು ಮಾಡುತ್ತಾ ಇದ್ದ ಚಂಡೀದಾಸ ಯೌವನದಲ್ಲಿದ್ದಾಗ ಒಮ್ಮೆ 'ರಾಮಿ' ಎಂಬ ಸುಂದರ ಸ್ತ್ರೀಯನ್ನು ನೋಡಿದ. ರಾಮಿಯ ಆಕರ್ಷಣೆಗೊಳಗಾದ ಚಂಡೀದಾಸ ತನ್ನನ್ನು ಸಂಪೂರ್ಣವಾಗಿ ಅವಳಿಗೇ ಅರ್ಪಿಸಿಕೊಂಡುಬಿಟ್ಟ. ರಾಮಿ ಚಂಡೀದಾಸನನ್ನು ಶಕ್ತಿಯ ಆರಾಧನೆಯಿಂದ ಕೃಷ್ಣನ ಪೂಜೆಯನ್ನು ಮಾಡುವಂತೆ ಪರಿವರ್ತಿಸಿದಳು. ರಾಮಿಯ ರೂಪದಲ್ಲಿ ಬೃಂದಾವನದ ಗೋಪಿಯೇ ಅವತರಿಸಿ ಬಂದಂತೆ ಚಂಡೀದಾಸನಿಗೆ ಗೋಚರಿಸುತ್ತಿದ್ದಿತಂತೆ!

ಬಂಗಾಳೀ ಸಾಹಿತ್ಯದ ಇತಿಹಾಸದಲ್ಲಿ, ಚಂಡೀದಾಸನಿಗೆ ವಿಶಿಷ್ಟವಾದ ಸ್ಥಾನವಿದೆ. ಅಲ್ಲದೆ ಚಂಡೀದಾಸ ವೈಷ್ಣವ, ಸಂತರಲ್ಲೆಲ್ಲಾ ಪ್ರಸಿದ್ಧನಾದವನಾಗಿದ್ದಾನೆ. ರಾಧಾ–ಕೃಷ್ಣರ ಜೀವನದ ರಮಣೀಯ ಘಟನೆಗಳನ್ನು ರೋಚಕವಾಗಿ ನಿರೂಪಿಸಿರುವ ಚಂಡೀದಾಸನಂತಹ ಮಹಾನ್ ಸಂತ ಕವಿಯನ್ನು ಕಂಡು ಗೌರವಿಸಲು ಕವಿ ವಿದ್ಯಾಪತಿ ಚಂಡೀದಾಸನ ಬಳಿಗೆ ಕಾಲ್ನಡಿಗೆಯಲ್ಲಿಯೇ ತೆರಳಿದನೆಂಬ ಕಥೆಯಿದೆ. ಬಂಗಾಳೀ ಸಾಹಿತ್ಯವಿರುವವರೆಗೂ ಚಂಡೀದಾಸನ ಹೆಸರಿರುತ್ತದೆ.

ಶ್ಯಾಮ ಸುಂದರ ಶರಣ ಆಮಾರ
ಶ್ಯಾಮ ಶ್ಯಾಮ ಸದಾಸಾರ ಶ್ಯಾಮ ಸೇ
ಜೀವನ
ಶ್ಯಾಮ ಸೇ ಪ್ರಾಣಧನ ಶ್ಯಾಮ ಸೇ
ಗಲಾರ ಹಾರ ॥

ಶ್ಯಾಮಸುಂದರನೇ ನನ್ನ ಆಶ್ರಯದಾತ, ನನ್ನ ಸರ್ವಸ್ವವೂ ಶ್ಯಾಮಸುಂದರನದೇ, ಶ್ಯಾಮನೇ ನನ್ನ ಜೀವನ, ಶ್ಯಾಮನೇ ನನ್ನ ಜೀವನದ ಉಸಿರಾಗಿದ್ದಾನೆ. ನನ್ನ ಕೊರಳಿನ ಹಾರವೂ ಶ್ಯಾಮಸುಂದರನೇ ಆಗಿದ್ದಾನೆ–ಎಂದಿದ್ದಾನೆ. ಸರಳವಾದ ಅರ್ಥಗರ್ಭಿತವಾದ, ಸುಂದರ ಬಂಗಾಳೀ ಭಾಷಾ ಶೈಲಿಯಲ್ಲಿ ಮೂಡಿಬಂದ ಚಂಡೀದಾಸನ ಕೀರ್ತನೆಗಳು, ಪದ್ಯಗಳು, ಭಾರತೀಯ ಸಾಹಿತ್ಯದ ಮುತ್ತಿನ ಮಣಿಮಾಲೆಯಂತಿವೆ.

ಮಿಥಿಲೆಯವನಾದ ವಿದ್ಯಾಪತಿಯ ಕಾರಣದಿಂದ ಮಿಥಿಲೆಯ ಪ್ರದೇಶದಲ್ಲಿ ಕೃಷ್ಣಭಕ್ತಿ ಪ್ರಸಾರಗೊಂಡಿತು. ಜಯದೇವನ 'ಗೀತಗೋವಿಂದ'ದ ಪ್ರಭಾವ ವಿದ್ಯಾಪತಿಯ ಮೇಲಾಗಿದೆ. ಸಂಸ್ಕೃತ ಅಪಭ್ರಂಶ, ಮೈಥಿಲೀ ಭಾಷೆಗಳಲ್ಲಿ ಬರೆದ ವಿದ್ಯಾಪತಿಯ ಕೃತಿಗಳು ಇವು–ಭೂಪರಿಕ್ರಮಣ, ದಾನವಾಕ್ಯಾವಲೀ, ದುರ್ಗಾಭಕ್ತಿ ತರಂಗಿಣಿ, ಶೈವಸರ್ವಸ್ವಸಾರ, ಕೀರ್ತಿಲತಾ, ಕೀರ್ತಿಪತಾಕಾ. ವಿದ್ಯಾಪತಿಯು ರಚಿಸಿರುವ ಗೇಯಪದಗಳನ್ನೊಳಗೊಂಡಿರುವ ಸಂಗ್ರಹವೇ "ವಿದ್ಯಾಪತಿ–ಕೆ–ಪದಾವಳಿ". ಪದಗಳನ್ನು ಪದ್ಯಗಳಿಗೆ, ಹಾಗು ಪದ್ಯಗಳ ಭಾವನೆಗಳಿಗೆ, ಹೊಂದುವಂತೆ ಅರಿಸಿಕೊಳ್ಳುವ ಕಲೆಗಾರಿಕೆ ವಿದ್ಯಾಪತಿಗೆ ಸಿದ್ಧಿಸಿತ್ತು. ಮಹಾರಾಜ ಶಿವಸಿಂಹನ ಆಸ್ಥಾನದಲ್ಲಿದ್ದವನು ವಿದ್ಯಾಪತಿ. ಇವನ ಕಾಲದ ವಿಚಾರವಾಗಿ ಅನೇಕ ವಾದವಿವಾದಗಳಿವೆ.

ಅನೇಕ ಕವಿಗಳು ರಾಧೆಯನ್ನು ನಾನಾವಿಧವಾಗಿ ವರ್ಣಿಸಿದ್ದಾರೆ. ಆದರೆ ವಿದ್ಯಾಪತಿ ರಾಧೆಯನ್ನು ವರ್ಣಿಸಿರುವುದು ಅತ್ಯಂತ ಆಕರ್ಷಕವಾಗಿದೆ. ಆ ಮಹಾಕವಿಯ ಪದ್ಯಗಳನ್ನೋದಿ, ಆ ರಸಾನುಭವದಲ್ಲಿ ಲೀನವಾಗುವುದು ಒಂದು ಪುಣ್ಯಮಯವಾದ ಕಾರ್ಯವೆಂದು ಭಕ್ತಿಭಾವನೆಯನ್ನು ಹೊಂದಿರುವ ಸಹೃದಯ ಅರಿಯುತ್ತಾರೆ. ಅದೆಷ್ಟು ವಿಧದಿಂದ, ವಿವಿಧ ಆಯಾಮಗಳಿಂದ ರಾಧೆಯನ್ನು ವರ್ಣಿಸಿದ್ದಾನೆ ವಿದ್ಯಾಪತಿ. ಭಕ್ತಿಯ ಆವೇಶ, ಶೃಂಗಾರ ರಸದಲ್ಲಿ ಪೂರ್ಣವಾಗಿ ಅಡಗಿಹೋಗಿರುವುದೋ ಎಂಬಂತೆ ಕೆಲವೊಮ್ಮೆ ವರ್ಣನೆಗಳು ಬರುತ್ತವೆ. ವಿದ್ಯಾಪತಿಯ ರಾಧಾ–ಕೃಷ್ಣರ ಸಂಭೋಗ ಶೃಂಗಾರದ ವರ್ಣನೆಗಿಂತಲೂ, ವಿಪ್ರಲಂಭ ಶೃಂಗಾರದ ವರ್ಣನೆಯ ಪದ್ಯಗಳು ಸೊಗಸಾಗಿವೆ. ರಾಧೆ ತನ್ನ ಸರ್ವಸ್ವವನ್ನು ಕೃಷ್ಣನಿಗರ್ಪಿಸಿದಾಳೆ. ಕೃಷ್ಣನಿದ್ದಾಗ ಎಲ್ಲೆಲ್ಲೂ ಸಂಭ್ರಮವೇ ತುಂಬಿದ್ದಿತು. ಆದರೆ ಕೃಷ್ಣ ಮಥುರೆಗೆ ಹೊರಟು ಹೋದ ನಂತರ ಇಡಿಯ ಗೋಕುಲವೇ ವ್ಯಥೆಯಲ್ಲಿ ತುಂಬಿದೆ. ಗೋಪ–ಗೋಪಿಯರೂ, ಪಶುಪಕ್ಷಿಗಳೂ ಸಹ ದುಃಖದಿಂದ ವ್ಯಥಿತರಾಗಿದ್ದಾರೆ. ವಿದ್ಯಾಪತಿಯ ಮನೋಭಾವನೆ ಪದ್ಯಗಳಲ್ಲಿ ಚೆನ್ನಾಗಿ ಮೂಡಿಬಂದಿದೆ.

ಸಖಿಯೊಬ್ಬಳು ರಾಧೆಯ ಸ್ಥಿತಿಯನ್ನು ಕೃಷ್ಣನಿಗೆ ಹೀಗೆ ತಿಳಿಸುತ್ತಾಳೆ. "ಹೇ ಕೃಷ್ಣ, ರಾಧೆ

( 31ನೇ ಪುಟ ನೋಡಿ )



# ಪ್ರಾಚೀನ ನೃತ್ಯ

ಶಾಸ್ತ್ರೀಯ ನಾಟ್ಯವೆನ್ನುವುದು ಯಾವ ದೇಶದಲ್ಲಿಯಾದರೂ ಸರಿಯೇ ಕ್ಲಿಷ್ಟವಾಗಿಯೇ ಇರುತ್ತದೆ. ಅದನ್ನು ಅಭ್ಯಾಸ ಮಾಡುವುದು ಎಷ್ಟು ಕಷ್ಟವೋ, ಅರ್ಥಮಾಡಿಕೊಂಡು ಆನಂದ ಹೊಂದುವುದೂ ಅಷ್ಟೇ ಕಷ್ಟಕರ. ಈ ಕಾರಣಗಳಿಂದಲೇ ಶಾಸ್ತ್ರೀಯ ನಾಟ್ಯ ಎನ್ನುವುದು ಯಾವಾಗಲೂ ಕೆಲವೇ ವ್ಯಕ್ತಿಗಳಿಂದ ಅಭ್ಯಾಸ ಹೊಂದಿ, ಹಲವು ಜನರ ಪರಿಮಿತವಾದ ಸಭ್ಯ ಸಮಾಜವನ್ನು ಸಂಪೂರ್ಣಯಾಗಿ ಸಂತಸಗೊಳಿಸಲು ಬಳಕೆಯಾಗುತ್ತದೆ. ಜನಸಾಮಾನ್ಯರಿಗೆ ಈ ನಾಟ್ಯದಿಂದ ಆನಂದವುಂಟಾಗುವುದು ಬಹುಮಟ್ಟಿಗೆ ಅಸಂಭವ. ಕಾರಣ ಅರ್ಥಮಾಡಿಕೊಳ್ಳಲು ಬೇಕಾದ ಶಾಸ್ತ್ರೀಯ ಪರಿಜ್ಞಾನ ಸಾಮಾನ್ಯರ ಪಾಲಿಗೆ ಇಲ್ಲದಿರುವುದು. ಈ ಅಂಶವನ್ನು ಒಂದೆಡೆಯಿಟ್ಟು ಮತ್ತೊಂದು ರೀತಿಯಲ್ಲಿ ಆಲೋಚಿಸಿದರೂ ಶಾಸ್ತ್ರೀಯ ನಾಟ್ಯದಲ್ಲಿನ ಅಸ್ವಾತಂತ್ರ್ಯವೂ ಸಾಮಾನ್ಯ ಜನಕ್ಕೆ ಹಿಡಿಸದ ವಿಷಯವೇ. ಸ್ವಚ್ಛಂದ ಪ್ರಿಯರಾದ ಶ್ರೀಸಾಮಾನ್ಯರಿಗೆ ಈ ಶಾಸ್ತ್ರದಾಸ್ಯವು ಅಷ್ಟೊಂದು ರುಚಿಸಿದು. ನಿಜವೆಂದರೆ ಶಾಸ್ತ್ರೀಯ ನಾಟ್ಯದಲ್ಲಿನ ರಸಭಾವಾದಿಗಳು ಬಹುಮಟ್ಟಿಗೆ ಕೃತಕವಾದವು. ನಟನು ಸ್ವತಃ ಪ್ರೇರಿತವಾದ ಭಂಗಿಗಳನ್ನು ತೋರಿಸುವುದರಲ್ಲಿಯಾಗಲೀ, ಭಾವಾವೇಶದಿಂದ ಅಭಿನಯಿಸುವುದರಲ್ಲಿಯಾಗಲೀ, ಮೈಮರೆತು ತಾಂಡವವಾಡುವುದರಲ್ಲಿಯಾಗಲೀ ಸ್ವತಂತ್ರನಲ್ಲ. ಶಾಸ್ತ್ರೀಯತೆ ಅವನ ಕಾಲಿನ ಸಂಕೋಲೆಯಾಗಿ ಮಾತುಮಾತಿಗೆ ಆತ್ಮೀಯತೆಯನ್ನು, ದೇಹಾಭಿಮಾನವನ್ನೂ, ನೆನಪಿಗೆ ತರುತ್ತ ಆದ್ಯಂತವೂ ಅವನನ್ನೊಂದು ಕೃತಕ ವಾತಾವರಣದಲ್ಲಿಯೇ ನಿಲ್ಲಿಸಿ, ಅನುಕರಣೆಯಲ್ಲದೆ ಸ್ವಚ್ಛಂದತೆಗೆ ಸ್ವಲ್ಪವೂ ಸಡಿಲಬಿಡದೆ ಶಾಸಿಸುತ್ತದೆ.

ಶಾಸ್ತ್ರೀಯ ನಾಟ್ಯದಲ್ಲಿ ನಾವು ನೋಡುವುದು ಬಹುಮಟ್ಟಿಗೆ ಶಾಸ್ತ್ರವಿಹಿತ ನಾಟ್ಯ ಭಂಗಿಗಳೇ ಹೊರತು ಹೊಸವು ಅಲ್ಲ. ಹೊಸವನ್ನು ತೋರಿಸುವುದಕ್ಕಿಂತ ಹಳೆಯವು, ಮೊದಲಿಗೆ ಶಾಸ್ತ್ರದಲ್ಲಿ ಎಂದೋ ಹೇಳಿರುವವುಗಳನ್ನೇ ತು. ಚ., ತಪ್ಪದೆ ಆಚರಿಸಿ ತೋರಿಸುವುದರಲ್ಲೇ ಶಾಸ್ತ್ರಜ್ಞನಾದ ನಟನ ಪ್ರತಿಭೆಯೆಲ್ಲ ವಿನಿಯೋಗವಾಗುತ್ತದೆ. ಪ್ರೇಕ್ಷಕರೂ ಸಹ, ಎಲ್ಲಿಯವರೆಗೆ ನಟನು ಪ್ರಾಚೀನ ನಾಟ್ಯ ವಿಧಾನವನ್ನು ಅಭ್ಯಾಸಮಾಡಿ ಪೋಷಿಸಿ ಪ್ರಕಾಶಪಡಿಸುತ್ತಿರುವನೆಂಬ ಅಂಶವನ್ನೇ ಗಮನಿಸಿ ಆತನ ಯೋಗ್ಯತೆ ಅಯೋಗ್ಯತೆಗಳನ್ನು ನಿರ್ಣಯಿಸಿ ಆನಂದಿಸುತ್ತಾರೆ. ಹೀಗೆ ಪರೀಕ್ಷಿಸಿ ಆನಂದಿಸುವ ಶಕ್ತಿ ಸಾಮಾನ್ಯರಿಗೆ ಕಡಮೆಯಿದ್ದು ಆ ಕಾರಣದಿಂದಲೇ ಅದನ್ನು ಅಷ್ಟಾಗಿ ಆದರಿಸುವುದೂ ಇಲ್ಲ. ಎಂದರೆ ಅವರಿಗೆ ನಾಟ್ಯ ಬೇಕಾಗಿಯೇ ಇಲ್ಲವೇ? ಅವರಿಗೆ ತಿಳಿದ ನಾಟ್ಯ ಎಂತಹದು? ಅವರರಿಯದ ಈ ನಾಟ್ಯಕಲೆ ಹೇಗೆ ಶಾಸ್ತ್ರೀಯವಾಯಿತು? ಅವರಿಗೆ ತಿಳಿದಿರುವ, ಅವರಿಂದ ಆದರಿಸಲ್ಪಟ್ಟಿರುವ, ಅಂಗೀಕರಿಸಲ್ಪಟ್ಟಿರುವ ನಾಟ್ಯಕ್ಕೆ ವಿಧಿವಿಧಾನಗಳು ಅಸಲು ಇಲ್ಲವೇ ಎಂದರೆ ಉತ್ತರ ತುಸು ದೀರ್ಘವಾಗುತ್ತದೆ.

ನಾಟ್ಯವೇ ಅಲ್ಲ; ಯಾವುದೇ ಕಲೆಗಾದರೂ ಮೊದಲಿಗೆ ಅಸಂಸ್ಕೃತ ರೂಪ, ನಂತರ ಜನ ಅಂಗೀಕರಿಸುವ ರೂಪ, ತದನಂತರ ಸಂಸ್ಕೃತ ರೂಪಗಳು ಕಾಲಾನುಸಾರವಾಗಿ ಉಂಟಾಗುತ್ತವೆ. ಇವುಗಳನ್ನು ಕಾಡುಕಲೆ, ಜಾನಪದ ಕಲೆ, ಶಾಸ್ತ್ರೀಯ ಕಲೆ ಎಂದು ಹೆಸರಿಸುತ್ತಾರೆ. ಮಾನವನ ಸಭ್ಯತೆ ದಿನದಿನಕ್ಕೆ ವಿಕಾಸವಾದಂತೆ, ಅನಾಗರಿಕನಾದ ಆಟವಿಕನು ನಾಗರಿಕನಾದಂತೆ, ಮೊದಲಲ್ಲಿದ್ದ ಕಾಡುಕಲೆಯೂ ದಿನದಿನವೂ ವಿಧಿವಿಧಾನಗಳನ್ನು ಹೊಂದುತ್ತ ಅಭಿವೃದ್ಧಿ ಹೊಂದಲು ಬೇಕಾದ ಸಂಸ್ಕಾರಗಳನ್ನು ಆಯಾ ಕಾಲಕ್ಕೆ ತಕ್ಕಂತೆ ಪಡೆದು ಶಾಸ್ತ್ರೀಯ ಕಲೆಯಾಗಿ ಪರಿಣಮಿಸುತ್ತದೆ. ನಾಟ್ಯವೂ ಹೀಗೇ.

ಶಾಸ್ತ್ರೀಯವಾದ ಯಾವ ಕಲೆಯಾದರೂ ಸರಿಯೇ, ಶಾಸ್ತ್ರೀಯತೆಯ ಹೆಸರಿನಲ್ಲಿ ತನ್ನ ಕಾಲಿಗೆ ತಾನೇ ಸಂಕೋಲೆ ಬಿಗಿಯುತ್ತ, ಅಸ್ವತಂತ್ರವಾಗಿ, ಹಿರಿಮೆಯನ್ನು ತೊರೆದು, ಜೀವಚ್ಛವವಾಗಿ, ಉನ್ನತಿಯತ್ತ ಹೊರಡುವುದನ್ನು ನಿಲ್ಲಿಸಿ ಪತನೋನ್ಮುಖವಾಗಿ ನಡೆಯುವುದು ಸಹಜ. ಅದರಿಂದಾಗಿ ಆ ಕಲೆಯ ವಿಕಾಸಕ್ರಮ ವಿರುದ್ಧವಾಗಿ ಬಂದಹಾದಿಯನ್ನೇ ಹಿಡಿದು ಹಿಂದಿರುಗಿ ಪುನಃ ಜಾನಪದ ಕಲೆಯಾಗಿ ನಂತರ ಕಾಡುಕಲೆಯಾಗಿಯೂ ಪರಿಣಮಿಸಬಹುದು.

ಸಭ್ಯತೆಯೊಂದಿಗೆ ಕಲೆ ವಿಕಾಸಹೊಂದಿದಂತೆಯೇ ಸಭ್ಯತೆ ನಾಶವಾದಾಗ ಕಲೆಗಳೂ ನಾಶವಾಗುವುದು ಸಹ ಸಹಜವೇ. ಕಲಾಸ್ಥಿತಿಯನ್ನು ಗಮನಿಸಿ ಒಂದು ದೇಶದ ಸಂಸ್ಕೃತಿಯನ್ನು ತಿಳಿದುಕೊಳ್ಳಬಹುದೆಂಬ ಕಲಾಭಿಜ್ಞರ ಮಾತಿನ ಪರಮಾರ್ಥ ಇದೇ. ಆದರೆ ಮಾನವರೆಲ್ಲ ಒಂದೇ ರೀತಿಯಾದ ಸಭ್ಯತೆ ಹೊಂದಿರುವುದು ಯಾವ ದೇಶದಲ್ಲೂ ಒಂದೇಕಾಲದಲ್ಲಿ ಕಾಣಬರದು. ನಾಗರಿಕರೊಂದಿಗೆ ಗ್ರಾಮೀಣರು, ಗಿರಿಜನರು ಸಹ ಎಲ್ಲ ದೇಶಗಳಲ್ಲಿಯೂ ಎಲ್ಲಕಾಲದಲ್ಲಿಯೂ ಕಂಡುಬರುತ್ತಾರೆ. ಪಂಡಿತರಿರುವಲ್ಲಿ ಪಾಮರರಿಲ್ಲದೆ ಹೋಗುವುದಿಲ್ಲ. ಹಾಗೆಯೇ ಕಲೆಗಳಲ್ಲೂ ಮೇಲೆ ಹೇಳಿದ ಮೂರು ರೂಪಗಳೂ ಎಲ್ಲ ಕಾಲದಲ್ಲೂ ಎಲ್ಲ ದೇಶಗಳಲ್ಲೂ ಉಂಟು. ನಾಟ್ಯದಲ್ಲೂ ಸಹ ನಮ್ಮ ದೇಶದಲ್ಲಿ ಮೇಲಿನ ಮೂರೂ ರೂಪಗಳು ಕಂಡುಬರುತ್ತವೆ. ಪರ್ವತಪ್ರಾಂತಗಳಲ್ಲಿ ವಾಸಿಸುವ ಅನಾಗರಿಕ ಜನರ ಗುಂಪುಗಳಲ್ಲಿ ಆಟವಿಕ ನೃತ್ಯ, ನಾಗರಿಕ ಸಮೂಹಗಳ ಸಾಮಾನ್ಯರಲ್ಲಿ ಜಾನಪದ ನೃತ್ಯ, ಸುಸಂಸ್ಕೃತ ಸಮಾಜಗಳಲ್ಲಿ ಶಾಸ್ತ್ರೀಯ ನೃತ್ಯಗಳು ಆದರಣೆಗೊಳ್ಳುತ್ತಿರುವುದು ನಾವು ಇಂದು ಕಾಣುತ್ತಿರುವ ಸತ್ಯ. ಈ ಸಮಯದಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ನಾಟ್ಯರೂಪಗಳಲ್ಲಿ ಒಂದೊಂದಾಗಿ ಕಾಲಕ್ರಮದಲ್ಲಿ ರೂಪುಗೊಂಡಂತೆಯೇ ಹಲವು ಸಮಯಗಳಲ್ಲಿ ಒಂದರಿಂದ ಮತ್ತೊಂದು ತನಗೆ ಬೇಕಾದ ಅಂಶವನ್ನು ಗ್ರಹಿಸಿ ಸ್ವಂತಮಾಡಿಕೊಂಡು ಜೀರ್ಣಿಸಿಕೊಂಡು ಪುಷ್ಟಿ ಹೊಂದುತ್ತಿರುವುದೆಂಬ ಸತ್ಯ.

ಆಟವಿಕ ನೃತ್ಯವಾಗಲೀ ಜಾನಪದ ನೃತ್ಯವಾಗಲೀ ವಿಶೇಷ ವಿಧಿ ವಿಧಾನಗಳನ್ನು ಹೊಂದಿರವು. ಅವುಗಳಲ್ಲಿ ಆಗತ್ಯವಾದದ್ದು ನಟರಲ್ಲಿನ ಆನಂದೋತ್ಸಾಹಗಳು ಮಾತ್ರವೇ. ಈ ಆನಂದ ಆತ್ಮಪ್ರೇರಿತ. ಆದ್ದರಿಂದಲೇ ಈ ನಾಟ್ಯಗಳು ಸಹಜವಾದವು. ಬಹುಮಟ್ಟಿಗೆ ಸ್ವಚ್ಛಂದವಾದವು.

ಮೂಲ:
**ಡಾ|| ಎಂ. ಸಂಗಮೇಶಂ, ಎಂ.ಎ**
ಅನುವಾದ:
**ಶ್ರೀಮತಿ ಎಸ್. ವಿ. ಹೇಮಾವತಿ, ಎಂ.**

ಇತರರನ್ನು ಆನಂದಗೊಳಿಸುವುದು ಇವರ ಉದ್ದೇಶವಲ್ಲ. ತಾವು ಆನಂದಿಸಬೇಕು. ಇಲ್ಲವೇ ತಮ್ಮನ್ನು ಸೃಷ್ಟಿಸಿ, ಪಾಲಿಸುತ್ತಿರುವ ಭಗವಂತ ಆನಂದಿಸಬೇಕು; ಇಷ್ಟೇ ಇವರ ಬಯಕೆ. ಈ ವಿಶ್ವಾಸವೇ ಅವರ ಧರ್ಮ. ಯಾರು ನಟಿಸಬೇಕು ? ಯಾರು ನೋಡಬೇಕು ? ಎನ್ನುವ ನಿಯಮ ಇವರಲಿಲ್ಲ. ಎಲ್ಲರೂ ನಟಿಸಬಹುದು. ಎಲ್ಲರೂ ಆನಂದಿಸಬಹುದು – ಅಲ್ಲ ; ನಟಿಸಿ ಆನಂದಿಸ ಬೇಕು. ತೃಪ್ತಿಯಾಗಿ ಆಡಿ, ಆನಂದ ಹೊಂದಿ, ಸುಸ್ತಾಗಿ ಒಬ್ಬ ಬದಿಗೆ ಬಂದು ಕುಳಿತರೆ ಮತ್ತೊಬ್ಬ ಎದ್ದು ಬಂದು ನಟಿಸಬೇಕು. ಸುಸ್ತಾದವನು ಸುಮ್ಮನೆ ಕುಳಿತಿರುವುದನ್ನು ಒಲ್ಲದೆ ಹೋದರೆ ಮದ್ದಳೆ ಬಾರಿಸಬಹುದು, ತಾಳಹಾಕಬಹುದು. ಅದೂ ಆಗದಿದ್ದಲ್ಲಿ ಚಪ್ಪಾಳೆ ಹೊಡೆದು ನಟಿಸುವವರನ್ನು ಪ್ರೋತ್ಸಾಹಿಸಬಹುದು. ಎಲ್ಲರಿಗೂ ಅನುಕೂಲವಾಗುವಂತೆ ಈ ನೃತ್ಯಗಳಲ್ಲಿ ತಾಳವಾಗಲೀ, ಮೇಳವಾಗಲೀ, ಆಟ, ವೇಶ, ಹಾಡುಗಳಾಗಲೀ – ಯಾವುದೂ ಎಟುಕಿಸಿಕೊಳ್ಳಲಾರದಷ್ಟು ಶಾಸ್ತ್ರೀಯವಾಗಿ ಇರವು, ಎಲ್ಲರಿಗೂ ದೊರಕುವಂತಿರುವಲ್ಲಿ ಮಾತ್ರವೇ ಇವು ಸಂಪ್ರದಾಯಗಳು, ಸಾಧ್ಯವಿದ್ದಷ್ಟು ಮಟ್ಟಿಗೆ ಇದೇ ವಿಧಾನವನ್ನು ಅನುಸರಿಸಿ ಇತರ ಕಲೆಗಳೂ ಸಹ ಈ ನಾಟ್ಯದಲ್ಲಿ ಸೇರಿಸಲ್ಪಡುತ್ತವೆ. ಈ ನಾಟ್ಯಗಳೆಲ್ಲ ಉತ್ಸವ ಸಮಯಗಳಲ್ಲಿ ಪ್ರದರ್ಶಿಸಲ್ಪಡುತ್ತವೆ. ನಾಟ್ಯವೇ ಒಂದು ಉತ್ಸವವಾಗಿ ರೂಪ ಹೊಂದುತ್ತದೆ. ಇಲ್ಲವೇ ಉತ್ಸವವೇ ನಾಟ್ಯ ರೂಪವನ್ನು ಹೊಂದುತ್ತದೆ. ಈ ಅವಿನಾಭಾವ ಸಂಬಂಧವೇ ಉತ್ಸವಕ್ಕೆ ಬೇಕಾದ ಭಕ್ತಿ ಶ್ರದ್ಧೆಗಳನ್ನು ನಾಟ್ಯಕ್ಕೆ ದೊರಕಿಸಿಕೊಡುತ್ತದೆ. ಆಟವಿಕರಲ್ಲಿಯಾಗಲೀ, ಜಾನಪದರಲ್ಲಿಯಾಗಲೀ ಉತ್ಸವಗಳಿಗೆ ಬಹುತೇಕ ಋತುಗಳೊಂದಿಗೆ ಸಂಬಂಧವಿರುತ್ತವೆ. ಇದು ಪ್ರಾಚೀನಧರ್ಮ. ವಸಂತೋತ್ಸವ, ವರ್ಷೋತ್ಸವ, ಶರನ್ನವರಾತ್ರಿ ಸಂಕ್ರಾಂತಿ ಮೊದಲಾದವುಗಳು, ಪ್ರಕೃತಿಯೊಡನೆ ಬೆರೆತು ಬದುಕಿದ ಮಾನವನು ಪ್ರಕೃತಿಯನ್ನೊಂದು ಶಕ್ತಿಯನ್ನಾಗಿಯೋ, ದೈವವನ್ನಾಗಿಯೋ, ಭಾವಿಸಿ, ಪೂಜಿಸಿ, ಪ್ರಕೃತಿದತ್ತವಾದ ಸುಖದುಃಖಗಳನ್ನು ಭಗವತ್ಪ್ರಸಾದ, ಪ್ರಕೋಪಗಳಾಗಿ ಸ್ವೀಕರಿಸಿ, ತನಗುಂಟಾದ ಭಯ, ವಿಶ್ವಾಸಗಳನ್ನು ಭಕ್ತಿ ಶ್ರದ್ಧೆಗಳಾಗಿ ಪರಿವರ್ತಿಸಿಕೊಂಡು ಪ್ರಕೃತಿ ವಶನಾಗಿ ಕೃತಜ್ಞತೆಯಿಂದ ಆಚರಿಸಿದ ಉತ್ಸವಗಳಿಗೆ ಪ್ರತೀಕಗಳು. ಇವು ಪರಂಪರಾಗತವಾದವು. ಬಹು ಪ್ರಾಚೀನಾಚಾರಗಳು. ಇವುಗಳಲ್ಲಿ ಆಯಾದೇಶವಾತಾವರಣವನ್ನು ಅನುಸರಿಸಿ ಬಂದ ವೈವಿಧ್ಯವೂ ಉಂಟು. ಹುಲಿಬೇಟೆಯಂತಹವು ಆಟವಿಕ ಜೀವನವನ್ನು, ವಸಂತೋತ್ಸವದಂತಹವು ವ್ಯಾವಸಾಯಿಕ ಜೀವನವನ್ನು ಪ್ರತಿಬಿಂಬಿಸುವಂತೆಯೇ, ಮಣಿಪುರಿ ನೃತ್ಯದ ಲಾಸ್ಯಗತಿಗಳು ಅಲ್ಲಿನ ಪ್ರಶಾಂತ ವಾತಾವರಣವನ್ನೂ, ಕಥಕ್ಕಳಿ ನೃತ್ಯದ ತಾಂಡವಗತಿ ಅಲ್ಲಿನ ಗಂಭೀರ ವಾತಾವರಣವನ್ನೂ ಪ್ರತಿಬಿಂಬಿಸುತ್ತವೆ. ದೇಶಾಚಾರ, ಸ್ಥಾನಿಕ ಚರಿತ್ರೆ, ಚಿರಂತನ ವಿಶ್ವಾಸಗಳು, ಇತಿಹಾಸ ಪುರಾಣಗಳಂತಹವು ಈ ನಾಟ್ಯಕ್ಕೆ ವಸ್ತುವನ್ನು ದೊರಕಿಸುವಂತಿರುತ್ತವೆ. ತಿರುಚನಾಪಲ್ಲಿಯಲ್ಲಿ ಕಾರ್ತೀಕ ಮಾಸದ ಶುಕ್ಲಪಕ್ಷದಲ್ಲಿ ಹದಿನೈದು ದಿನ ನಾಟ್ಯೋತ್ಸವ ನಡೆಸುತ್ತಾರೆ. ಇದು ಕಾಮದಹನೋತ್ಸವ. ಮನೆಮನೆಯಲ್ಲೂ ದೀಪಗಳನ್ನು ಬೆಳಗಿಸುವರು. ಅರ್ಧ ಸುಟ್ಟ ಕೊಳ್ಳಿಗಳನ್ನು ತಂದು ಮನೆಯ ಅಂಗಳದಲ್ಲಿ ನೆಡುತ್ತಾರೆ. ಮಳೆ ಬಂದು ಆ ಕೊಳ್ಳಿಗಳು ಆರಿಹೋದಲ್ಲಿ ಬರುವ ವರ್ಷ ಮಳೆ ಬಂದು ಬೆಳೆ ಚೆನ್ನಾಗಿ ಆಗುವುದೆಂಬ ಜನಗಳ ನಂಬಿಕೆ. ಬಳ್ಳಾರಿಜಿಲ್ಲೆಯಲ್ಲಿ ಇದೇ ಕಾಮದಹನ ಉತ್ಸವ ಫಾಲ್ಗುಣ ಶುದ್ಧ ದ್ವಾದಶಿಯಂದು ಕಾಮವಿಗ್ರಹ ಪ್ರತಿಷ್ಠೆಯಿಂದ ಆರಂಭವಾಗಿ, ಪೂರ್ಣಿಮೆಯ ದಿನ ಪರಾಕಾಷ್ಠೆಗೇರುತ್ತದೆ. ನೃತ್ಯಗೀತೆಗಳು ಯಥೇಚ್ಛ. ಕಾಮವಿಗ್ರಹಗಳನ್ನು ಎಷ್ಟೋಕಡೆ ದೊಡ್ಡ ಬೆಂಕಿಯಲ್ಲಿ ಸುಡುತ್ತಾರೆ. ವಸಂತದ ನೀರಾಟವಾಡುತ್ತಾರೆ. ಬಹುಳ ತದಿಗೆಯ ದಿನಕ್ಕೆ ಮಳೆಬಿದ್ದು ಪೂರ್ಣಿಮೆಯಂದು ಹಾಕಿ ಅಲ್ಲಿಯವರೆಗೆ ಇರಿಸಿದ ಬೆಂಕಿ ಆರಿದರೆ ಅದು ಶುಭಸೂಚಕವೆಂದು ಅಲ್ಲಿನ ಪ್ರಜೆಗಳ ನಂಬಿಕೆ.

ಇಂತಹವನ್ನು ಹೇಳುತ್ತಲೇ ಹೋಗಬಹುದು. ಈ ನೃತ್ಯಗಳೆಲ್ಲ ಆಟವಿಕರಲ್ಲೂ, ಜಾನಪದರಲ್ಲೂ ಅವರವರ ಜೀವನವನ್ನು, ಮತವನ್ನು, ಮೌಢ್ಯವನ್ನೂ ಪ್ರಕಟಿಸುವಂತಿರುತ್ತವೆ.

ಈ ನೃತ್ಯಗಳು ಎರಡು ಬಗೆಯವು. ಪುರುಷ ನೃತ್ಯ, ಸ್ತ್ರೀ ನೃತ್ಯ. ಸಂಥಾಲರಂತಹ ಗಿರಿಜನರಲ್ಲಿ ಅಲ್ಲದೆ ಇತರರಲ್ಲಿ ಸ್ತ್ರೀ ಪುರುಷರು ಸೇರಿ ನರ್ತಿಸುವ ಆಚಾರವಿಲ್ಲ. ಇನ್ನು ನಾಟ್ಯಧರ್ಮ ಹಿಡಿದು ಹೇಳುವುದಾದರೆ ಈ ನೃತ್ಯಗಳು ಧಾರ್ಮಿಕ, ಸಾಂಘಿಕ, ವೈವಾಹಿಕ ಎಂದು ಮೂರು ಬಗೆಯವು. ವಿಧಾನವನ್ನು ಅನುಸರಿಸಿ ಲಾಸ್ಯ, ತಾಂಡವ ಎರಡೂ ಉಂಟು. ಆದರೆ ಇವುಗಳಲ್ಲಿ ಅಷ್ಟೊಂದು ಅಂತರವಿಲ್ಲ. ಮೂಲಭೂತವಾಗಿ ಇವುಗಳಲ್ಲಿ ಯಾವುದಕ್ಕೂ ಒಂದು ನಿಯಮವಾಗಲೀ, ಸಂಯಮವಾಗಲೀ ಇರದು. ಡೋಲು ಮದ್ದಳೆ, ಢಕ್ಕೆ, ತಾಳದ ಚಿಪ್ಪು ಮೊದಲಾದ ವಿಶೇಷ ವಾದ್ಯಗಳು ಬಳಕೆಯಾಗುತ್ತವೆ. ಸಂಗೀತ ಬಹುತೇಕ ಇರದು. ಇರುವಲ್ಲಿ ವೃಂದಗಾನವಾಗಿರುತ್ತದೆ. ಇಲ್ಲವೇ ಒಬ್ಬ ಮೊದಲು ಹಾಡಿದರೆ ನಂತರ ಎಲ್ಲರೂ ಸಾಲುಹಿಡಿದು ಹಾಡುವರು. ಹಾಡು ಇರುವಲ್ಲಿ ಶ್ರುತಿ ಇರುತ್ತದೆ. ಆದರೆ ಇರಲೇಬೇಕೆಂಬ ನಿಯಮವಿಲ್ಲ. ನಟರು ಆಡಂಬರವಿಲ್ಲದಿದ್ದರೂ ಸನ್ನಿವೇಶಕ್ಕೆ ತಕ್ಕಂತೆ ವೇಶ ಹಾಕುವರು. ಅಭಿನಯ ಬಹುಮಟ್ಟಿಗೆ ಸ್ವಚ್ಛಂದ. ಪಾದಗತಿ ಮಾತ್ರ ತಾಳ ಲಯಾನುಗುಣವಾಗಿರುತ್ತವೆ. ಎಂದರೆ ನಾಟ್ಯಕ್ಕೆ ಅಗತ್ಯವಾದ ಎಲ್ಲ ಅಂಶಗಳೂ ಇವರ ನಾಟ್ಯದಲ್ಲಿ ಕಂಡುಬಂದರೂ ಇದು ಹೀಗೆಯೇ ಇರಬೇಕೆಂಬ ನಿಯಮಗಳಿಲ್ಲ. ★

# ಸಾಹಿತ್ಯ ಹಾಗೂ ವೈಜ್ಞಾನಿಕ ಕ್ಷೇತ್ರದಲ್ಲಿ ಮಾವು

ಮಂಗಳ ವಾದ್ಯಗಳು ಎಲ್ಲಿರುವವೋ ಅಲ್ಲಿ ಮಾವಿನ ತೋರಣ ಕಾಣುವುದು. ಎಲ್ಲಾ ಶುಭಕಾರ್ಯಕ್ಕೂ ಮಾವು ಅತ್ಯಾವಶ್ಯಕ ವಾದದ್ದು. ವೇದ ಘೋಷದಿಂದ ಅಭಿಷೇಕ ಮಾಡುವ ಗುಡಿ ಗೋಪುರಗಳ ಮುಖದ್ವಾರದಲ್ಲಿ ಮಾವಿನ ಎಲೆಯ ತೋರಣ ಎಲ್ಲರಿಗೂ ಸುಸ್ವಾಗತವನ್ನು ನೀಡುವುದು. ಹಾಗೇ ಹಬ್ಬ ಉಣ್ಣಿಮೆ, ಶುಭಕಾರ್ಯಗಳಲ್ಲಿ ಮಾವಿನ ತೋರಣ ಇದ್ದೇ ಇರುವುದು. ಅದು ಎಲ್ಲರಿಗೂ ಶುಭವನ್ನು ಕೋರುವುದು. ವೃಕ್ಷಪೂಜೆ ದೇವತಾಪೂಜೆಯಷ್ಟೇ ಪ್ರಾಚೀನವಾದುದು. ಬಹುಶಃ ಮೂರ್ತಿ ಪೂಜೆಗಿಂತ ಹಿಂದಿನದೆಂದರೂ ತಪ್ಪಾಗಲಾರದು. "ಕಾಣದ ದೈವಕ್ಕಿಂತ ಪ್ರತ್ಯಕ್ಷ ದೈವಕ್ಕೆ ಮೊದಲ ಪೂಜೆಯಷ್ಟೆ". ಕೆಲವು ವೃಕ್ಷಗಳನ್ನು ದೇವತೆಗಳೆಂದು ಭಾವಿಸಿ ಪೂಜಿಸುವುದೂ ಒಂದು ಆಚಾರ. ವೃಕ್ಷಗಳಲ್ಲಿ ಅತಿ ಮುಖ್ಯವಾದ ಮಾವನ್ನು – ಸಾಹಿತ್ಯದಲ್ಲಿ, ವೈಜ್ಞಾನಿಕ ರಂಗದಲ್ಲಿ ಅದರ ಪ್ರಾಮುಖ್ಯವನ್ನು ಪರಿಶೀಲಿಸೋಣ.

ಅಶ್ವತ್ಥ ವೃಕ್ಷ ವೈರಾಗ್ಯವನ್ನು ಕೊಡುತ್ತದೆ. ಹೊಂಗೆ ಮರ ನಿದ್ರೆಯನ್ನು ಬಿಸಿಲು ಕಾಲದಲ್ಲಿ ಚೆನ್ನಾಗಿ ಕೊಡುವುದು, ಆದರೆ ಮಾವು ಎಲ್ಲರಿಗೂ ಎಲ್ಲಾ ವಿಧದಲ್ಲೂ ಕೆಲಸಕ್ಕೆ ಬರುವುದು. ಕಲ್ಪವೃಕ್ಷವೆಂದರೆ ಬೇಡಿದ್ದನ್ನೆಲ್ಲ ಕೊಡುವ ವೃಕ್ಷವೆಂದೂ ಅದು ಸಕಲ ಭೋಗ ಭಾಗ್ಯಗಳನ್ನು ನೀಡುವುದೆಂದೂ ಸಾಹಿತ್ಯದಲ್ಲಿ ವಿವರಿಸುವರು. ವೇದ ಕಾಲದಿಂದಲೂ ಮಾವಿನ ವೈಶಿಷ್ಟ್ಯ ತಿಳಿದು ಬರುವುದು, ಅಲ್ಲದೆ ಯಜುರ್ವೇದದಲ್ಲಿ ವಿವಿಧ ಯಾಗಮಾಡುವ ಸಂದರ್ಭದಲ್ಲಿ ಉಪಯೋಗಿಸುವ ಸಮಿತ್ತುಗಳಲ್ಲಿ ಮಾವಿನ ಪ್ರಾಮುಖ್ಯವನ್ನು ವಿವರಿಸಿದ್ದಾರೆ. ಲೋಕದಲ್ಲಿ ಹಿರಿಯರು ಪುಣ್ಯ ಕಾರ್ಯಗಳಿಗೆ ಸಪ್ತ ಸಂತಾನ ಕಾರ್ಯವೆಂದು ಕರೆಯುವ ವಾಡಿಕೆ ಇದೆ, ಅದರಲ್ಲಿ ತೋಟನಿರ್ಮಾಣ ಮಾಡುವುದು, ದೇವಾಲಯ ನಿರ್ಮಾಣ ಮಾಡುವುದು. ಭಾವಿ ನಿರ್ಮಾಣ, ಒಂದು ಗ್ರಂಥವನ್ನು ಅಂಕಿತ ಸ್ವೀಕರಿಸುವುದು – ಇತ್ಯಾದಿಗಳಿವೆ. ಗಂಡು ಮಗು ಸಂತಾನವಿಲ್ಲದಿದ್ದರೆ ಅದು ಸಂಸಾರವೇ ಅಲ್ಲ, ವಿಗ್ರಹವಿಲ್ಲದಿದ್ದರೆ ಅದು ಗುಡಿಯೇ ಅಲ್ಲ. ಹಾಗೆ ತೋಟದಲ್ಲಿ ಮಾವು ಇಲ್ಲದಿದ್ದರೆ ಅದು ತೋಟವೇ ಅಲ್ಲ ಎಂಬುದು ವಾಡಿಕೆಯಲ್ಲಿದೆ.

ಆಮ್ರ ಎಂದರೆ ಮಾವು ಎಂದು ಅರ್ಥ. ಕಂಚಿಯಲ್ಲಿರುವ ಮಾವಿನ ಗಿಡದಲ್ಲಿ ನಾಲ್ಕು ತರಹ ರುಚಿಯಿರುವ ಹಣ್ಣು ಬಿಡುತ್ತದೆಂದು ಹೇಳುತ್ತಾರೆ. ಅಲ್ಲದೆ ಪಾರ್ವತೀದೇವಿ ಮಾವಿನ ಮರದ ಕೆಳಗೆ ತಪಸ್ಸುಮಾಡಿ ಈಶ್ವರನನ್ನು ವಿವಾಹವಾದಳೆಂದು ಅಲ್ಲಿರುವ ಏಕಾಮ್ರೇಶ್ವರ ಸ್ವಾಮಿಯ ಸ್ಥಲಪುರಾಣ ತಿಳಿಸುತ್ತದೆ.

ಮನ್ಮಥನ ಬಾಣಗಳು ಐದು 1, ಅರವಿಂದ, 2. ಅಶೋಕ, 3. ಚೂತ, 4. ನವಮಲ್ಲಿಕ, 5. ಉತ್ಪಲ ಪುಷ್ಪ. ಇದರಲ್ಲಿ ಮನ್ಮಥನು ಚೂತ ಪುಷ್ಪ (ಮಾವಿನ ಹೂ) ವನ್ನೇ ಅಧಿಕವಾಗಿ ಕೋರುವನು. ಅಲ್ಲದೆ ನವ ವಸಂತ (ವಸಂತಮಾಸ) ಇವನಿಗೆ ಸ್ನೇಹಿತನು. ಅವನಿಗೆ ಮಾವಿನ ಹೂ ಎಂದರೆ ಬಹಳ ಆಸೆ. ಆದ್ದರಿಂದ ಮನ್ಮಥನೂ ವಸಂತನೂ ಸಹಕರಿಸಿ ಕುಮಾರ ಸಂಭವಕ್ಕಾಗಿ ಈಶ್ವರನ ಘೋರ ತಪಸ್ಸನ್ನು ಭಂಗಪಡಿಸಿ ಪಾರ್ವತಿಯ ವಿವಾಹಕ್ಕೆ ಕಾರಣನಾಗಿ ಈಶ್ವರನ ಮೂರನೇ ಕಣ್ಣಿನಿಂದ ಭಗ್ನನಾದನು.

ಮಾವಿಗೆ ಆಮ್ರ, ಚೂತ, ರಸಾಲ, ಸಹಕಾರ, ಅತಿಸೌರಭ ಎಂಬ ಐದು ಹೆಸರುಗಳುಂಟು. 'ಅಮ್ಯೇತೇ ಅಭಿಲಿಷತೇ ಇತಿ ಆಮ್ರಃ' ಎಲ್ಲರೂ ಕೋರುವುದು ಎನ್ನುವ ಅರ್ಥ. ರಸವನ್ನು ಅದೇ ಕೊಡುವುದು. ಸ್ತ್ರೀ ಪುರುಷರನ್ನು ಸೇರಿಸುವುದು ಆದ್ದರಿಂದ ಸಹಕಾರಿ ಎಂದು ಅರ್ಥ, ಅನ್ಯೋನ್ಯ ಅನುರಾಗ ತೋರಿಸುವಾಗ ಮಾವಿನ ಗಿಡವನ್ನು ಸುತ್ತಿಕೊಂಡಿರುವ ಮಾಧವೀ ಲತೆ ಎಂದು ಹೇಳುವುದು ಕವಿಗಳ ಸಂಪ್ರದಾಯ. ಮಾವಿನ ಗಿಡ ಗಂಡಾದರೆ ಲತೆ ಹೆಣ್ಣಾಗುವುದು. ಕಾಳಿದಾಸನ ಕುಮಾರ ಸಂಭವ ಕಾವ್ಯದಲ್ಲಿ ಮನ್ಮಥನು ಸುಟ್ಟು ಹೋದಾಗ ರತಿ ವಿಲಾಪದಲ್ಲಿ 'ಮರವೇ ಹೋದ ಮೇಲೆ ಲತೆ ಹೇಗೆ ಜೀವಿಸುವುದು' ಎಂದು ಬಿಕ್ಕಿ ಬಿಕ್ಕಿ ಅಳುವಳು.

ಜಗನ್ನಾಥ ಪಂಡಿತನು ಮಾವಿನ ಗಿಡವನ್ನು ದೃಷ್ಟಿಯಲ್ಲಿಟ್ಟುಕೊಂಡು ಜನರ ಸ್ವಭಾವವನ್ನು ಅನೇಕ ವಿಧದಲ್ಲಿ ಹಾಡಿರುವನು: ಅದರಲ್ಲಿ ಒಂದು ಭಾವ ಈ ರೀತಿ ಇದೆ: 'ನೀನು ಏಕೆ ಭೂಮಿಯಲ್ಲಿ ಹುಟ್ಟಿದೆ? ಹುಟ್ಟಿದೆಯಾದರು ನಿನ್ನ ಶಾಖೆ ಉಪಶಾಖೆಗಳು ಚೆನ್ನಾಗಿರುವ ನೆರಳು ಕೊಡುತ್ತಿರುವುವು. ಅಲ್ಲದೆ ರುಚಿಕರವಾದ ಹಣ್ಣು ಕೊಡುತ್ತಿರುವೆ ಆದರೂ ನಿನ್ನ ನೆರಳಿನಲ್ಲಿದ್ದ ಮಾನವರು ಕಲ್ಲಿನಿಂದ ನಿನ್ನನ್ನು ಹೊಡೆದು ಹಣ್ಣುಗಳನ್ನು ಹೊಂದುವರು'. ಈ ಹಾಡಿನಲ್ಲಿ ಉಪಕಾರವನ್ನು ಹೊಂದಿ ಅವರಿಗೆ ಅಪಕಾರ ಮಾಡುವ ಜಾತಿಯನ್ನು ವರ್ಣನೆ ಮಾಡಿ ನಿಂದಿಸುವನು.

ಜನರು ವಾಡಿಕೆಯಲ್ಲಿ ಮಾವು, ಬೇವು, ಅಶ್ವತ್ಥ ವೃಕ್ಷಗಳನ್ನು ಪೂಜಿಸುತ್ತಾರೆ. ಬೌದ್ಧ ಮತೀಯರು ಬೋಧಿ ವೃಕ್ಷವನ್ನು ಪೂಜಿಸುತ್ತಾರೆ. ಹಿಂದುಗಳು ಉಗಾದಿ ಹಬ್ಬದಲ್ಲಿ ಷಡ್ ರುಚಿಗಳನ್ನು ತಿನ್ನುವ ವಾಡಿಕೆ ಇದೆ. ಷಡ್‌ರುಚಿ ಎಂದರೆ ಮಾವಿನ ಕಾಯಿ, ಬೇವಿನ ಹೂ, ಬೆಲ್ಲ, ಹುಣಿಸೇ

ಶ್ರೀ ಹೆಚ್.ಆರ್. ಗೋಪಾಲಕೃಷ್ಣ
ಎಂ.ಎಸ್‌ಸಿ.

ಹಣ್ಣು, ಕಬ್ಬು, ಬಾಳೆ ಹಣ್ಣುಗಳನ್ನು ಬೆರೆಸಿ ಆಂಧ್ರ ಪ್ರದೇಶದ ವಿವಿಧ ಭಾಗಗಳಲ್ಲಿ ತಿನ್ನುವ ಆಚಾರ. ಆದರೆ ಕರ್ನಾಟಕದಲ್ಲಿ ಯುಗಾದಿಯ ದಿನ ಉಷಃ ಕಾಲಕ್ಕೆ ಎದ್ದು, ಮಂಗಳಸ್ನಾನಮಾಡಿ. ಮಾವಿನ ತೋರಣ ಕಟ್ಟಿ ನೂತನ ವಸ್ತ್ರಗಳನ್ನು ಧರಿಸಿ, ಮನೆ ದೇವರಿಗೆ ನಮಸ್ಕರಿಸಿ ಬೇವು ಬೆಲ್ಲ ತಿಂದು ಪಂಚಾಂಗ ಶ್ರವಣ ಮಾಡುವುದು ಹಬ್ಬದ ವಿಶೇಷ. ಬೇವು ಬೆಲ್ಲ ತಿನ್ನುವುದು ಏಕೆಂದರೆ ಕಹಿಸಿಹಿ ಎರಡನ್ನೂ ಅಂದರೆ ಕಷ್ಟ – ಸುಖ, ಅಳು – ನಗು, ನೋವು – ನಲಿವು, ಸುಖ – ಲಾಭ, ಪ್ರೀತಿ ಗಳಿಸಿಕೊಳ್ಳುವ ಶಕ್ತಿ, ಸಾಮರ್ಥ್ಯ-ಸುಖ – ದುಃಖಗಳ ಸಮರವೇ ಜೀವನ. ದೇಹಕ್ಕೆ ತಂಪುನೀಡುವ ಬೇವು ಬೇಕು, ಉಷ್ಣ ಪ್ರಧಾನವಾದ ಬೆಲ್ಲವೂ ಬೇಕು. ಮಾವು, ಬೇವು, ಅಶ್ವತ್ಥ ವೃಕ್ಷಗಳು ದೇವತಾ ಸ್ವರೂಪಗಳೆಂಬ ಮಹತ್ತರ ಭಾವನೆ ಉಂಟು.

ಹಣ್ಣು ಬಂದಿದೆ ಕೊಳ್ಳಿರೋ ನೀವೀಗ |
ಚೆನ್ನ ಬಾಲಕೃಷ್ಣನೆಂಬೊ
ಚಿನ್ನ ಬಾಳೆ || ಪ ||

ಹವ್ಯ ಕವ್ಯದ ಹಣ್ಣು ಸವಿವ
ಸಕ್ಕರೆ ಹಣ್ಣು
ಭವ ರೋಗಗಳೆನ್ನೆಲ್ಲ ಕಳೆವ ಹಣ್ಣು |
ನವನೀತ ಚೋರನೆಂಬೊ ಜವನ
ಅಂಜಿಪ ಹಣ್ಣು
ಅವನಿಯೊಳು ಶ್ರೀರಾಮನೆಂಬೋ
ಹಣ್ಣು || ೧ ||

ಕೊಳೆತು ಹೋಗುವುದಲ್ಲ ಹುಳಿತು
ಹೋಗುವುದಲ್ಲ
ಕಳೆದು ಬಿಸಾಡಿ ಕೊಳ್ಳುವುದಲ್ಲ |
ಅಳತೆಕೊಂಬುವುದಲ್ಲ | ಗಿಳಿಕಚ್ಚಿ
ತಿಂಬೋದಲ್ಲ |
ಬಳಿಕಾದ ಹರಿಯೆಂಬೋ ಮಾವಿನ
ಹಣ್ಣು || ೨ ||

ಕೆಟ್ಟು ನಾರುವುದಲ್ಲ ಬಿತ್ತಿ
ಬೆಳೆಯೋದಲ್ಲ
ಕಷ್ಟದಿ ಹಣ ಕೊಟ್ಟು ಕೊಂಬುವದಲ್ಲ !
ಸೃಷ್ಟಿಯೊಳಗೆ ನಮ್ಮ ಪುರಂದರ ವಿಠಲ
ಕೃಷ್ಣರಾಯನೆಂಬೊ ಶ್ರೇಷ್ಠಾದ
ಹಣ್ಣು || ೩ ||

ಹಿಂದೂ ದೇಶದಲ್ಲಿ ಭಕ್ತಿ ಭಾವವನ್ನು ನಿರಂತರ ಹರಿಯುವಂತೆ ಮಾಡಿದ ನಾರದಾಂಶರೆಂದು ಹೆಸರಾದ ಪುರಂದರದಾಸರು ಮಾವಿನ ಹಣ್ಣು ಒಳಿತಾದ ಹರಿಯೆಂಬೊ ನಾಮಕ್ಕೆ ಹೋಲಿಸಿ ಮೇಲೆ ಹೇಳಿರುವ ರೀತಿಯಲ್ಲಿ ವಿವರಿಸಿದ್ದಾರೆ.

ವಿಜ್ಞಾನದ ದೃಷ್ಟಿಯಲ್ಲಿ ಮಾವಿನ ಪಾತ್ರವನ್ನು ಗಮನಿಸುವ. ಮಾವನ್ನು Mangifeia Indica ಎನ್ನುತ್ತಾರೆ. ಇದು Anaca radioceac ಎಂಬ ಕುಟುಂಬಕ್ಕೆ ಸೇರಿದ್ದು. 40 – 50 ಅಡಿ ಎತ್ತರವಾಗಿ ಉಷ್ಣವಲಯದಲ್ಲಿ ಬೆಳೆಯುವ ಮರ. ಈಗ ವಿಜ್ಞಾನಿಗಳು ಮಾವಿನ ಎತ್ತರವನ್ನು 10-12 ಅಡಿಗಳಿಗೆ ಇಳಿಸಿ ಫಲವನ್ನು ಹೆಚ್ಚಿಗೆ ಮಾಡಿರುವರು.

ಗಿಡ, ಮರಗಳು ಅದರಲ್ಲೂ ಎಲೆಗಳು ಅದರಲ್ಲಿರುವ ಹರಿತರೇಣುವಿನಿಂದ ನಾವುಗಳು ಬಿಟ್ಟ ಇಂಗಾಲ (carbon-di-oxide) ವನ್ನು ತೆಗೆದುಕೊಂಡು ಆಹಾರವನ್ನು ತಯಾರು ಮಾಡುವುದು, ಅಲ್ಲದೆ ಜೀವರಾಶಿಗಳಿಗೆ ಬೇಕಾದ ಪ್ರಾಣವಾಯುವನ್ನು ಕೊಡುವುದು.

ಮಾವು ವೃಕ್ಷದೇವತೆ, ಹಣ್ಣುಗಳಲ್ಲಿ ಬಹಳ ಜನಪ್ರಿಯವಾದದ್ದು ಮಾವಿನ ಹಣ್ಣು - ಹಣ್ಣುಗಳರಾಜ. ನಮ್ಮ ಭರತಖಂಡದಲ್ಲಿ, ಅಷ್ಟೇ ಏಕೆ ವಿಶ್ವದ ವಿವಿಧ ದೇಶಗಳಲ್ಲಿ ಮಾವಿನ ಹಣ್ಣಿಗೆ ಬಹಳ ಗಿರಾಕಿ ಇದೆ. ನಮ್ಮ ದೇಶದಲ್ಲಿ ಮಾವಿನ ಹಣ್ಣು ತಿನ್ನದೇ ಇರುವವರು ಅತಿ ವಿರಳ, ಮಾವಿನ ಹಣ್ಣಿನ ರುಚಿ ಬಲ್ಲವನೇ ಬಲ್ಲ, ಅದರಲ್ಲೂ ಮಲಗೂಬ, ರಸಾಲ, ರಸಪುರಿ, ಗಿಣಿಮೂತಿ, ಬಾದಾಮಿ, ಪೀತರ್, ತೋತಾಪುರಿ, ನೀಲಂ, ಬಂಗನಪಲ್ಲೆ - ಇತ್ಯಾದಿ ನಾನಾ ಜಾತಿಗಳಿವೆ. ಊಟವಾದ ಮೇಲೆ ಮಾವಿನ ಹಣ್ಣು ತಿನ್ನುವುದು ಎಲ್ಲರ ವಾಡಿಕೆಯಾಗಿದೆ. ಹಣ್ಣು ತಿನ್ನುವುದಕ್ಕೆ ಬಹುರುಚಿ, ಅಲ್ಲದೆ ಬಹಳ ಆರೋಗ್ಯಕರವಾದದ್ದು, ಪೌಷ್ಟಿಕಾಹಾರವಾಗಿದೆ.

ಮಾವಿನ ಕಾಯಿ ಕೂಡ ಬಹಳ ಕೆಲಸಕ್ಕೆ ಬರುವುದು. ಅದರಲ್ಲೂ ಗರ್ಭಿಣಿಯರು 3ನೇ ತಿಂಗಳಲ್ಲಿ ಮಾವಿನ ಕಾಯಿ ಚೆನ್ನಾಗಿ ತಿಂದು ತಮ್ಮ ಬಯಕೆಯನ್ನು ತೀರಿಸಿ ಕೊಳ್ಳುವರು. ಅಲ್ಲದೆ ಗರ್ಭವೂ ನಿಲ್ಲುವುದೆಂದು ಹಿರಿಯರು ಹೇಳುತ್ತಾರೆ. ಮಾವಿನ ಕಾಯಿ ಚಟ್ನಿ, ಗೊಜ್ಜು, ಉಪ್ಪಿನಕಾಯಿ, ಅಲ್ಲದೆ ಬಗೆ ಬಗೆಯ ಅಡಿಗೆಗೂ ಮಾವಿನಕಾಯಿ ಉಪಯೋಗಿಸುವರು. ಮಾವಿನಕಾಯನ್ನು ನೆನಸಿಕೊಂಡರೆ ಬಾಯಲ್ಲಿ ನೀರೂರುವುದು.

ಮಾವಿನ ತೋಟಗಳನ್ನು ಹೆಚ್ಚಾಗಿ ಬೆಳೆಸುವುದರಿಂದ ಬಹಳ ಜನಕ್ಕೆ ಜೀವನೋಪಾಯವಾಗುವುದು, ವಿದೇಶಕ್ಕೆ ರಫ್ತು ಮಾಡುವುದರಿಂದ ನಮ್ಮ ಹಿಂದೂದೇಶಕ್ಕೆ ಅಪಾರ ಹಣವು ಲಭಿಸುವುದು.

ಇಂಡಿಕಾ ಎಂದರೆ ಇಂಡಿಯ ದೇಶದಲ್ಲಿ ಹುಟ್ಟಿದುದೆಂದು. ಮೇಂಗಿ ಫೆರೆ ಇಂಡಿಕಾ ದಲ್ಲಿ ವಿಜ್ಞಾನದ ರೀತಿಯಲ್ಲಿ ಎರಡು ಹೆಸರು ಸೇರಿರುವುದು. ಪ್ರಜಾತಿ ಮೇಂಗಿ ಫೆರ, ಜಾತಿ ಇಂಡಿಕಾ. ಮಾವಿನ ಹಣ್ಣು ಹಿಂದೂ ದೇಶದಿಂದ ಬೇರೆ ಬೇರೆ ದೇಶಗಳಿಗ ವಲಸೆಹೋಗಿ ಪವಿತ್ರವಾದ ಸ್ಥಾನ ಪಡೆದಿದೆ, ವೇದಗಳು ನಮ್ಮ ದೇಶದಿಂದ ಬೇರೆ ಬೇರೆ ದೇಶಗಳನ್ನು ಸೇರಿ ಪವಿತ್ರತೆಯನ್ನು ಪಡೆದಿರುವಂತೆ.

ಹಿಂದೂ ಧಾರ್ಮಿಕ ಸಾಹಿತ್ಯದಲ್ಲಿ ಪೂಜಾರ್ಹವಾದ ಪವಿತ್ರವಾದ ವೃಕ್ಷಗಳು ಅನೇಕವಾಗಿದೆ. ಅದರಲ್ಲಿ ದೇವತೆಗಳು ವಾಸಿಸುತ್ತಾರೆ ಎಂದು ನಂಬಿಕೆ. ನೂರಾರು ವರ್ಷಗಳ ಕಾಲ ಬಾಳಿ ತನ್ನ ಆಶ್ರಯದಾತನಿಗೆ ಸದಾ ಫಲ ನೀಡುವ ಮಾವು ಕಲ್ಪವೃಕ್ಷವಾಗಿದೆ. ಇಂತಹ ವೃಕ್ಷ ದೇವತೆಯನ್ನು ಮಾನವ ಪೂಜಿಸಿದರೆ ಭೋಗಾಭಿಲಾಷೆ ಈಡೇರುವುದು.

———

# ಗೀತೋಕ್ತ ಜ್ಞಾನ

ಶ್ರೀ ಎಸ್. ರಾಮಕೃಷ್ಣ

ಅನಾದಿ ನಿಧನಂ ವಿಷ್ಣುಂ
ಸರ್ವ ಲೋಕ ಮಹೇಶ್ವರಂ ।
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ
ಸರ್ವದುಃಖಾತಿಗೋ ಭವೇತ್ ॥

ಜಗತ್ತಿನಲ್ಲಿ ಜನಿಸಿದ ಜೀವರಾಶಿಗಳ ಜಂಜಾಟವೆಂದರೆ ಜನನ ಮತ್ತು ಮರಣ. ಇವೆರಡು ಬಿಡಿಸಿಕೊಳ್ಳಲಾಗದ ವಿಷಯುಗಳು. ಈ ವಿಷಯದಲ್ಲಿ ಪರಿತಪಿಸಿದಲ್ಲಿ ಪ್ರಯೋಜನವಿಲ್ಲ. ಜನಿಸಿದ ದೇಹ, ಈ ದೇಹದ ಮೇಲಿನ ಮೋಹ, ಈ ಮೋಹಕ್ಕೆ ವಿರುದ್ಧವಾದುದು ಘಟಿಸಿದರೆ ಶೋಕ, ಈ ಶೋಕ ಮೋಹಗಳೇ ಜೀವಿಯನ್ನು ಜನ್ಮ ಜನ್ಮಾಂತರಕ್ಕೆ ಕಟ್ಟಿ ಎಳೆಯುವ ಪಾಶ. ಸತ್ತವರಿಗಾಗಿ ಅಳುವುದಾದರೆ ಅಳುವವನು ಉಳಿಯಬೇಕು. ಆದರೆ ಅಳುವವನೂ ಅಳಿಯುವವನೇ. ಅಳಿಯುವುದನ್ನು ಉಳಿಸಿಕೊಳ್ಳಲಾಗಲೀ, ಉಳಿಯುವುದನ್ನು ಅಳಿಸಲಾಗಲೀ ಆಗುವಂತಿಲ್ಲ. ಈ ಒಳಗುಟ್ಟನ್ನು ಮನವರಿಕೆ ಮಾಡಿಕೊಳ್ಳದಿರುವುದೇ ಮಾಯಾ (ಅವಿದ್ಯೆ) ಎನ್ನುವುದು. ಆದುದರಿಂದಲೇ ನಾವು ಪುನಃ ಪುನಃ ದುಃಖಕ್ಕೆ ಒಳಗಾಗಿ ಬಿಡಿಸಿಕೊಳ್ಳಲಾಗದೆ ಒದ್ದಾಡುತ್ತಾ ಜನನ ಮರಣದ ಯಾತ್ರೆಯಲ್ಲಿ ನಿತ್ಯ ಪಯಣಿಗರಾಗಿದ್ದೇವೆ. ಜನಿಸಿದ ಮೇಲೆ ಪುನಃ ಜನ್ಮಕ್ಕೆ ಬಾರದಂತೆ ಪ್ರಯತ್ನದ ಮಾರ್ಗದಲ್ಲಿ ನಡೆದಲ್ಲಿ ಬದುಕು ಸಾರ್ಥಕ. ನಮ್ಮ ಜನ್ಮಕ್ಕೂ ಜನಿಸಿದ ಮೇಲೆ ನಾವು ಮಾಡುವ ಕರ್ಮಕ್ಕೂ (ಜೀವನಕ್ಕೆಂದು ಮಾಡುವ ಯಾವ ಕೆಲಸಕ್ಕೂ) ನಮ್ಮ ನಮ್ಮ ಹಿಂದಿನ ಸಂಸ್ಕಾರಗಳೇ ಕಾರಣ. ಈ ಎಲ್ಲಾ ಕಾರ್ಯಗಳಿಗೆ ಸರ್ವ ಸಾಕ್ಷಿಯಾಗಿ ಸರ್ವ ಪ್ರೇರಕನಾಗಿ ಸರ್ವ ಭೂತ ಚೈತನ್ಯನಾಗಿರುವ ಪರಮಾತ್ಮನ ಇರವಿನ ಅರಿವನ್ನುಂಟುಮಾಡಿಕೊಳ್ಳುವುದೇ ಪುನಃ ಜನ್ಮಕ್ಕೆ ಬಾರದಂತೆ ತಡೆಯಬಲ್ಲ ಸರ್ವಶಕ್ತಿ (ತತ್ತ್ವ). ಇದನ್ನೇ ಪರಮಾರ್ಥ ಅಥವ ಮೋಕ್ಷವೆನ್ನುವುದು. ಇದೇ ಮಾನವನ ನಿಜವಾದ ಶ್ರೇಷ್ಠ ಧರ್ಮವಾಗಿದೆ. ಆದರೆ ಈ ಧರ್ಮಕ್ಕೆ ಸಾಧನಾ ಮಾರ್ಗಗಳು ಪ್ರತ್ಯೇಕ ಪ್ರತ್ಯೇಕ – ಯಾರು ಯಾರು ಯಾವುದನ್ನು ಮಾಡಬೇಕೋ ಅದನ್ನೇ ಮಾಡಬೇಕು. ಕಣ್ಣು ಕೇಳುವುದಾಗಲೀ, ಕಿವಿ ನೋಡುವುದಾಗಲೀ ಹೇಗೆ ಅಸಂಗತವೋ ಹಾಗೆ ನಮ್ಮ ನಮ್ಮ ಇಚ್ಛೆಯಂತೆ ಕರ್ಮವನ್ನು ಮಾಡುವಂತಿಲ್ಲ. ಯಾರು ಯಾವುದನ್ನು ಮಾಡಬೇಕು, ಯಾವುದನ್ನು ಮಾಡಬಾರದೆಂದು, ತಿಳಿಸುವ ಸೂಕ್ತ ಸಲಹೆಗಳೇ ಶಾಸ್ತ್ರ ಹಾಗೂ ಧರ್ಮಗಳ ಉಪದೇಶಗಳು. ಈ ಉಪದೇಶವು ಪರಮಾತ್ಮನಿಂದಲೇ ನಿಯೋಜಿಸಲ್ಪಟ್ಟಿದೆ ಎಂಬ ದೃಢನಂಬಿಕೆಯೇ ಮೊದಲನೆಯ ಧರ್ಮ. ನಂಬುಗೆ ಎನ್ನುವುದು ಇಲ್ಲವಾದಲ್ಲಿ ಯಾವುದೂ ಇಲ್ಲವೇ ಇಲ್ಲ. ದೇವರಿಲ್ಲವೆಂದು ಹೇಳುವವನು ನಾಲಿಗೆಯಿಲ್ಲದೆ ಮಾತನಾಡಬಲ್ಲೆ ಎಂದು ವಾದಿಸಿದಂತೆ. ಆದುದರಿಂದ ಈಶ್ವರನೆಂಬುವನು ಸರ್ವಥಾ ಶಾಶ್ವತ. ಇವನ ಇರವನ್ನು ತಿಳಿಸುವುದೇ ಶಾಸ್ತ್ರ. ಇದನ್ನು ನಂಬುವುದು ನಂಬದೇ ಇರುವುದು ಅವರವರ ಗುಣ ಧರ್ಮಗಳು.

ನಡೆಯುವ ಕಾರ್ಯಗಳೆಲ್ಲವೂ ಗುಣಗಳನ್ನು ಅನುಸರಿಸಿಯೇ ನಡೆಯುವುವು, ಆ ಗುಣಗಳೇ, ಸತ್ವ, ರಜ, ತಮೋಗುಣಗಳು. ಈ ಗುಣಗಳನ್ನು ಅನುಸರಿಸಿ ಫಲಗಳು, ಧರ್ಮ, ಕರ್ಮ, ಪಾಪಪುಣ್ಯ ಹಾಗೂ ಹಿತ ಅಹಿತ – ಇವೇ ಮೊದಲಾದವುಗಳು ಪ್ರಕಟವಾಗುತ್ತವೆ. ಅವರವರ ಗುಣಗಳನ್ನು, ಮನೋಧರ್ಮಗಳನ್ನು ಅನುಸರಿಸಿ ಕರ್ಮಗಳು ವಿಭಾಗಿಸಲ್ಪಟ್ಟಿವೆಯಾದುದರಿಂದ ಎಲ್ಲವೂ ಸಮಾನವೇ. ಇದರಲ್ಲಿ ಹೆಚ್ಚು ಅಥವ ಕಡಿಮೆ ಎಂಬುದಿಲ್ಲ. ಎಲ್ಲವೂ ಪರಮಾತ್ಮನ ಅಧೀನ. ನಾನು ಅನ್ನುವುದು ಕೇವಲ, ಎಲ್ಲವೂ ನೀನೇ ಅನ್ನುವುದೇ ಕೈವಲ್ಯ. ಜನಿಸಿದವರೆಲ್ಲರೂ ಈ ತತ್ತ್ವವನ್ನು ಅರಿಯಲೆತ್ನಿಸುವುದಿಲ್ಲ. 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ'– ಸಾವಿರದಲ್ಲಿ ಯಾರೋ ಒಬ್ಬನು ಈ ತತ್ತ್ವವನ್ನು ಅರಿಯಲು ಆಶಿಸುತ್ತಾನೆ. ಹೀಗೆ ಆಶಿಸುವ ಸಾವಿರದಲ್ಲಿ ಯಾರೋ ಒಬ್ಬನು ನಿಜವಾದ ತತ್ತ್ವವನ್ನು ಅರಿಯುತ್ತಾನೆ. ರಸದ ಆಸೆಗೆ ಬಲಿಯಾದ ಮೀನು ಪಾತಾಳದಲ್ಲಿದ್ದರೂ ಗಾಳಕ್ಕೆ ಬಂದು ಬೀಳುತ್ತದೆ. ಪುಂಗಿಯ ಶಬ್ದದ ನಾದಕ್ಕೆ ಮೈಮರೆತ ಸರ್ಪ ಬಂದಿಯಾಗುತ್ತದೆ, ದೀಪದ ರೂಪಕ್ಕೆ ದೀಪದ ಹುಳು ಪತನವಾಗುತ್ತದೆ, ಸ್ಪರ್ಶಸುಖದ ಬಯಕೆಯಿಂದ ಕಾಡಾನೆ ತಾನೇ ಬಂದು ಬೀಳುತ್ತದೆ, ಮಾಂಸದ ವಾಸನೆಯಿಂದ ಕ್ರೂರಮೃಗವೂ ಬೋನಿನಲ್ಲಿ ಬಂದಿಯಾಗುತ್ತದೆ. ಹೀಗೆ ಇಂದ್ರಿಯಗಳ ಬಯಕೆ ಒಂದೊಂದರಿಂದಲೇ ತಮ್ಮ ಸರ್ವಸ್ವವನ್ನು ಕಳೆದುಕೊಳ್ಳುವ ಬಲಿಷ್ಠ ಪ್ರಾಣಿಗಳ ಗತಿ ಹೀಗಿರುವಲ್ಲಿ ಪಂಚೇಂದ್ರಿಯಗಳಲ್ಲಿ ಸಮನಾದ ಸರ್ವಸುಖವನ್ನು ಸೀಮಿತವಿಲ್ಲದೆ ಬಯಸುವ ಮಾನವನ ಗತಿ ಏನು? ಹೇಗೆ ತಾನೆ ಪೂರ್ಣತತ್ತ್ವವನ್ನು ಅರಿಯಲು ಸಮರ್ಥನೆನಿಸಿಕೊಳ್ಳುತ್ತಾನೆ? ಪ್ರಯತ್ನಮಾಡುವ ಪುರುಷನು ಅರಿತವನಾದರೂ ಪೂರ್ಣವನ್ನು ಅರಿಯಲು ತೊಡಗಿದಾಗ ಅವನ ಇಂದ್ರಿಯಗಳು ಅಡಚಣೆಯನ್ನುಂಟುಮಾಡುತ್ತವೆ. "ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ" ಎಂಬಂತೆ ಅವನತಿಗೆ ಎಳೆಯುತ್ತವೆ. ಯಾರು ಈ ಇಂದ್ರಿಯಗಳ ಪಯಣದಲ್ಲಿ ಯಾತ್ರಿಕನಾಗಲು ಬಯಸುವುದಿಲ್ಲವೋ, ಈ ಜಂಜಾಟದಿಂದ ಬಿಡುಗಡೆಯನ್ನು ಬಯಸುವನೋ, ಅವನು ತನ್ನ ಇಂದ್ರಿಯಗಳನ್ನು ಕುದುರೆಯ ಕಡಿವಾಣವನ್ನು ಹಿಡಿದಿರುವಂತೆ ತಡೆಹಿಡಿದುಕೊಂಡು ಕಾರ್ಯವನ್ನು ಮಾಡಲು ಶಕ್ತನಾಗುತ್ತಾನೆ.

ತಾನಿ ಸರ್ವಾಣಿ ಸಂಯಮ್ಯ
ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯ ಇಂದ್ರಿಯಾಣಿ
ತಸ್ಯ ಪ್ರಜ್ಞಾ ಪ್ರತಿಷ್ಠಿತಾಃ ॥

ಆದುದರಿಂದ ಶಾಶ್ವತ ಸುಖವನ್ನು ಬಯಸುವನು ತನ್ನ ಇಂದ್ರಿಯುಗಳು ವಿಷಯ ಚಾಪಲ್ಯದೆಡೆಗೆ ಎಳೆದಾಗ ಬುದ್ಧಿಯಿಂದ ಅವುಗಳನ್ನು ತಡೆಹಿಡಿದು ಯುಕ್ತವಾದ ಕಾರ್ಯದಲ್ಲಿ ತೊಡಗುವನು. ಉತ್ತಮವಾದ

( 23ನೇ ಪುಟ ನೋಡಿ

# ತಿ. ತಿ. ದೇವಸ್ಥಾನಗಳು, ತಿರುಪತಿ.



# ಒಂದು ಹಕ್ಕಿನೋಟ

1. ಧಾರ್ಮಿಕ

| | |
|---|---|
| ಅ) ದೇವಾಲಯಗಳು | 42 |
| ಆ) ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಶಾಖೆಗಳು | 18 |

2. ಸಾಂಸ್ಕೃತಿಕ

| | |
|---|---|
| ಅ) ವಸ್ತು ಸಂಗ್ರಹಾಲಯಗಳು | 2 |
| ಆ) ಕಲ್ಯಾಣ ಮಂಟಪಗಳು | 12 |

ಪತ್ರಿಕೆಗಳು

| | |
|---|---|
| ಅ) ಮಾಸಪತ್ರಿಕೆ | ಸಪ್ತಗಿರಿ (5 ಭಾಷೆಗಳಲ್ಲಿ) |
| ಆ) ವಾರ್ಷಿಕ | ಕ್ಯಾಲೆಂಡರ್ ಹಾಗೂ ಪಂಚಾಂಗ |

3. ಯಾತ್ರಿಕರ ಅನುಕೂಲಗಳು

| | |
|---|---|
| ಅ) ಯಾತ್ರಿಕರ ( 1981–82 ರಲ್ಲಿ ) ಸಂಖ್ಯೆ 77 ಲಕ್ಷ | |
| ಆ) ಸತ್ರಗಳು | 10 |
| ಇ) ಬಾಡಿಗೆ ಕೋಣೆಗಳು, ಮನೆಗಳು | 903 |
| ಈ) ಅತಿಥಿ ಗೃಹಗಳು | 9 |
| ಉ) ಉಪಹಾರ ಗೃಹಗಳು | 9 |
| ಊ) ಚಿಕಿತ್ಸಾ ಕೇಂದ್ರಗಳು ಹಾಗೂ ಆಸ್ಪತ್ರೆಗಳು | 9 |

4. ಶಿಕ್ಷಣ ಸಂಸ್ಥೆಗಳು

| | |
|---|---|
| ಅ) ಧಾರ್ಮಿಕ ಹಾಗೂ ಪ್ರಾಚ್ಯ ವಿಜ್ಞಾನ | 5 |
| ಆ) ಕಲೆ ಹಾಗೂ ವಿಜ್ಞಾನ | 6 |
| ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ | 4 |
| ಈ) ಶಾಲೆಗಳು | ೦ |

5. ದತ್ತಿ ಸಂಸ್ಥೆಗಳು 3

6. ಸೇವೆಗಳು

| | |
|---|---|
| ಹೂದೋಟಗಳು | 32 |

ಹಯನೋತ್ಪಾದನೆ

| | |
|---|---|
| ಅ) ಜಾನುವಾರು ಸಂಖ್ಯೆ | 389 |
| ಆ) ಕೃಷಿ ಭೂಮಿ | 260 ಎಕರೆ |
| ಇ) ಕಾನನ ಪ್ರದೇಶ | 7160 ಎಕರೆ |
| ಈ) ಪ್ರಮುಖ ತೀರ್ಥಗಳು | 16 |
| ಉ) ಅಣೆಕಟ್ಟುಗಳು (ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು) | 2 |
| ಊ) ವಾಹನಗಳು | 179 |
| ಎ) ಮುದ್ರಣ ಶಾಲೆ | 1 |

7. ಆಡಳಿತ

| | |
|---|---|
| ಅ) ಘಟಕಗಳು | 108 |
| ಆ) ಕೆಲಸಗಾರರು | 5772 |

8. ಆರ್ಥಿಕ ಸ್ಥಿತಿ

| | 80–81 | 81–82 |
|---|---|---|
| ಕಾಣಿಕೆ | ರೂ. 7.94 ಕೋಟಿ. | ರೂ. 9.33 ಕೋಟಿ |
| ಒಟ್ಟು | ರೂ. 22.61 ಕೋಟಿ. | ರೂ. 26 ಕೋಟಿ |



# ಶ್ರೀವೆಂಕಟೇಶ್ವರ ಬ್ರಹ್ಮೋತ್ಸವ ವೈಭವ

ತಿರುಮಲೆಯಲ್ಲಿ ದಿನದಿನವೂ ಉತ್ಸವಗಳು ನಡೆದರೂ ಬ್ರಹ್ಮೋತ್ಸವದ ವಿತರಣೆ ವಿಜೃಂಭಣೆ ಕಂಡು ಬರುವುದಿಲ್ಲ. ಬ್ರಹ್ಮೋತ್ಸವ ಉತ್ಸವಗಳ ಬೀಡಾದ ತಿರುಮಲೆಯಲ್ಲಿ ನಡೆಯುವ ಮಹೋತ್ಸವ. ಭಕ್ತರ ಹೃನ್ಮನಗಳನ್ನು ತಣಿಸುವ ಪರ್ವಕಾಲ.

ಅನಾದಿಕಾಲದಲ್ಲಿ ಪಿತಾಮಹ ಬ್ರಹ್ಮನಿಂದಲೇ ಆರಂಭಿಸಲ್ಪಟ್ಟು ಅನೂಚಾನವಾಗಿ ನಡೆದು ಬರುತ್ತಿರುವ ಈ ಉತ್ಸವದ ಪ್ರಶಂಸೆ ವರಾಹ ಪುರಾಣ, ವೇಂಕಟಾಚಲ ಮಾಹಾತ್ಮ್ಯೆ, ಭವಿಷ್ಯೋತ್ತರ ಪುರಾಣವೇ ಮೊದಲಾದ ಗ್ರಂಥಗಳಲ್ಲಿ ಕಂಡು ಬರುತ್ತದೆ. ಆದಿಬ್ರಹ್ಮನೇ ಈ ಉತ್ಸವದ ಸೂತ್ರಧಾರಿ. ಉತ್ಸವದ ಸಮಯದಲ್ಲಿ ಪ್ರತಿಯೊಂದೂ ನಡೆಯುವುದು ಆತನ ಪರ್ಯವೇಕ್ಷಣೆಯಲ್ಲೇ. ಸಾಲಂಕೃತನಾದ ಸ್ವಾಮಿ ವಿವಿಧ ವಾಹನಗಳನ್ನೇರಿ ಹೊರಹೊರಟಾಗ ಉಸ್ತುವಾರಿಗಾಗಿ ಬ್ರಹ್ಮದೇವರೂ ಹೊರಡಬೇಕು. ಅಲಂಕೃತವಾದ ಸಣ್ಣ ರಥವೊಂದು ಸ್ವಾಮಿಯ ಮುಂದೆ ನಡೆಯಲೇಬೇಕು. ಆಕಾರ ರಹಿತನಾದ ಬ್ರಹ್ಮ ಅವ್ಯಕ್ತವಾಗಿ ಆ ರಥದಲ್ಲಿ ಕುಳಿತು ಕಾರ್ಯಕ್ರಮವನ್ನು ವೀಕ್ಷಿಸುತ್ತಿರುತ್ತಾನೆ.

ಚಾರಿತ್ರಿಕವಾಗಿ ಈ ಉತ್ಸವ ದಂತಿವರ್ಮ ಪಲ್ಲವನ ಕಾಲದಲ್ಲಿ ಪ್ರಾರಂಭಿಸಲ್ಪಟ್ಟಿತೆಂದು ತಿಳಿದು ಬರುತ್ತದೆ. ಪಲ್ಲವ ರಾಜಕುಮಾರಿ ಸಾಮವೈ, ಮಾರ್ಗಳಿಮಾಸದಲ್ಲಿ ಏಳು ದಿನಗಳಕಾಲ ಈ ಉತ್ಸವ ನಡೆಯಬೇಕೆಂದು ನಿರ್ದೇಶಿಸಿ ಶ್ರೀನಿವಾಸನ ಬೆಳ್ಳಿಯ ವಿಗ್ರಹವೊಂದನ್ನೂ, ಉತ್ಸವದ ಖರ್ಚಿಗೆಂದು ಭೂಮಿ, ಬೆಳ್ಳಿ ಬಂಗಾರಗಳನ್ನೂ ದೇವಾಲಯಕ್ಕೆ ಕೊಟ್ಟಳು. ಆ ವಿಗ್ರಹವೇ ಈಗ "ಮನವಾಳ ಪೆರುಮಾಳ್" ಎನ್ನಿಸಿಕೊಳ್ಳುವ ಮೂರ್ತಿ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಎರಡನೆಯ ಹರಿಹರರಾಯನು ಬ್ರಹ್ಮೋತ್ಸವವೊಂದನ್ನೇರ್ಪಡಿಸಿ ಅದರ ನಿರ್ವಹಣೆಗಾಗಿ ಹಲವು ಗ್ರಾಮಗಳನ್ನು ದೇವಾಲಯಕ್ಕೆ ಬಿಟ್ಟುಕೊಟ್ಟಂತೆ ಶಾಸನಗಳಿಂದ ತಿಳಿದುಬರುತ್ತದೆ.

ಇವಲ್ಲದೆ ಹತ್ತು ಹನ್ನೆರಡನೆಯ ಶತಮಾನಗಳ ನಡುವೆ ಆಡಿಮಾಸದಲ್ಲೂ ಒಂದು ಬ್ರಹ್ಮೋತ್ಸ ನಡೆಯುತ್ತಿದ್ದಂತೆ ತಿಳಿದುಬರುತ್ತದೆ. ಏನಾದರೂ ತಿರುಮಲೆಯಲ್ಲಿ ಪುರಟ್ಟಾಸಿ ಮಾಸದಲ್ಲಿ ನಡೆಯುವ, ಬ್ರಹ್ಮೋತ್ಸವಕ್ಕೆ ಹೆಚ್ಚಿನ ಪ್ರಾಶಸ್ತ್ಯ.

ಈಗ ತಿರುಮಲೆಯಲ್ಲಿ ಬ್ರಹ್ಮೋತ್ಸವ ಹತ್ತುದಿನ ನಡೆದರೂ ಮೊದಲ ದಿನದ ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರಾಮುಖ್ಯವಿಲ್ಲ. ಉತ್ಸವದ ಅಂಗವಾಗಿ ಮೊದಲ ದಿನದ ಸಾಯಂಕಾಲ ವಿಷ್ವಕ್ಸೇನರು ದೇವಾಲಯದ ಸುತ್ತಲೂ ಮೆರವಣಿಗೆ ಹೊರಟು ಯಾಗಶಾಲೆಗಾಗಿ ಪವಿತ್ರ ಮೃತ್ತಿಕೆಯನ್ನು ಸಂಗ್ರಹಿಸಿಕೊಂಡು,



ಧ್ವಜಾರೋಹಣ



ದೊಡ್ಡ ಶೇಷವಾಹನ

ಮೂರನೆಯದಿನ ಪ್ರಾರಂಭವಾಗುವ ಕಾರ್ಯಕ್ರಮಗಳಿಗೆ ಸಕಲ ದೇವತೆಗಳನ್ನೂ ಆಹ್ವಾನಿಸಿ, ತಿರುಮಲರಾಯನ ಮಂಟಪವನ್ನು ಸೇರುತ್ತಾರೆ.

ಎರಡನೆಯದಿನ ಬ್ರಹ್ಮೋತ್ಸವ ಶಾಸ್ತ್ರೋಕ್ತವಾಗಿ ಪ್ರಾರಂಭವಾಗುತ್ತದೆ. ಉತ್ಸವಮೂರ್ತಿಯಾದ ಶ್ರೀ ಮಲಯಪ್ಪಸ್ವಾಮಿ ಉಭಯದೇವೇರಿಯರೊಡನೆ ಬಂಗಾರದ 'ತಿರುಚ್ಚಿ'ಯಲ್ಲಿ ತಿರುಮಲರಾಯನ ಮಂಟಪಕ್ಕೆ ಬಿಜಯಮಾಡುತ್ತಾನೆ. ವೇದಘೋಷ, ಮಂಗಳವಾದ್ಯಗಳ ಶ್ರುತಿಗಳೊಂದಿಗೆ ಧ್ವಜಾರೋಹಣ ನಡೆಯುತ್ತದೆ. ಸ್ವಾಮಿಯ ಗರುಡಧ್ವಜ (ವಿಶಾಲವಾದ ನೂತನ ವಸ್ತ್ರದ ಮೇಲೆ ಚಿತ್ರಿಸಲ್ಪಟ್ಟ ಗರುಡನ ಚಿಹ್ನೆಯುಳ್ಳ ಪತಾಕೆ) ಧ್ವಜಸ್ತಂಭವನ್ನೇರುತ್ತದೆ. ಬ್ರಹ್ಮೋತ್ಸವ ವಿಶೇಷವೆಂದರೆ ಪ್ರತಿದಿನವೂ ಶ್ರೀಯವರು ವಿವಿಧವಾಹನಗಳ ಮೇಲೆ ಮೆರವಣಿಗೆ ಹೊರಡುವುದು.



ಚಿಕ್ಕ ಶೇಷವಾಹನ

ಮೊದಲನೆಯ ರಾತ್ರಿ (ಎಂದರೆ ಎರಡನೆಯ ದಿನದ ರಾತ್ರಿ) ಮಲಯಪ್ಪಸ್ವಾಮಿಯವರು ದೇವೇರಿಯರೊಡನೆ "ದೊಡ್ಡ ಶೇಷವಾಹನ"ದ ಮೇಲೆ ದೇವಾಲಯದ ಪ್ರದಕ್ಷಿಣ ಮಾಡುತ್ತಾರೆ.

ಎರಡನೆಯ ಪ್ರಾತಃಕಾಲ ಶ್ರೀಸ್ವಾಮಿಯವರಿಗೆ ಮಾತ್ರ 'ಸಣ್ಣ ಶೇಷವಾಹನ'. ಅದೇ ಸಂಜೆ ಹಂಸವಾಹನ.

ಮೂರನೆಯದಿನದ ಬೆಳಿಗ್ಗೆ 'ಸಿಂಹವಾಹನ', ರಾತ್ರಿ 'ಮುತ್ತಿನಚಪ್ಪರ' (ಮುತ್ತಿನ ಹಾರಗಳಿಂದ ಅಲಂಕೃತವಾದ ಚಪ್ಪರದಲ್ಲಿ ಕುಳಿತ ಸ್ವಾಮಿಯ) ಮೆರೆವಣಿಗೆ ನಡೆಯುತ್ತದೆ.

ನಾಲ್ಕನೆಯ ದಿನ ಸ್ವಾಮಿಯವರು ಉಭಯ ದೇವೇರಿಯರೊಡನೆ "ಕಲ್ಪವೃಕ್ಷವಾಹನ"ವನ್ನಲಂಕರಿಸಿ ದೇವಳದ ಸುತ್ತಲೂ ಹೊರಡುವರು.



ಹಂಸ ವಾಹನ



ಸಿಂಹ ವಾಹನ



ಮುತ್ತಿನ ಚಪ್ಪರ ವಾಹನ



ಕಲ್ಪವೃಕ್ಷ ವಾಹನ

ಅದೇ ಸಾಯಂಕಾಲ "ಸರ್ವಭೂಪಾಲವಾಹನ", ಬಂಗಾರದ ಮುಲಾಮಿನಿಂದ ಹೊಳೆಯುವ ಈ ವಾಹನದ ಮೇಲೆ ಉಭಯನಾಚ್ಚಿಯಾರರೊಡನೆ ಹೊರಟ ಸ್ವಾಮಿ ದೀಪಗಳ ಕಾಂತಿಯಲ್ಲಿ ನಯನ ಮನೋಹರನಾಗಿ ಸರ್ವಪಾಪಹರನಾಗಿ ಪ್ರಕಾಶಿಸುತ್ತಾನೆ.

ಬ್ರಹ್ಮೋತ್ಸವದ ಉತ್ಸವಗಳಲ್ಲೆಲ್ಲಾ ಅತಿ ಆಕರ್ಷಣೀಯವಾದದ್ದೆಂದರೆ ಐದನೆಯದಿನದ 'ಮೋಹಿನೀ ಅವತಾರ'. ಈ ಉತ್ಸವಕ್ಕೆ ಉತ್ಸವಮೂರ್ತಿಯನ್ನು ಮೋಹಿನಿಯಂತೆ ಸರ್ವಾಂಗ ಸುಂದರವಾಗಿ ಅಲಂಕರಿಸುತ್ತಾರೆ. ಕಡೆಗೆ ವರದಹಸ್ತವೂ 'ಅಭಯಹಸ್ತ' ವಾಗುತ್ತದೆ. ಸರ್ವಾಲಂಕಾರ ಭೂಷಿತಳಾದ ಮೋಹಿನಿ ದಂತದ ಪಲ್ಲಕಿಯಲ್ಲಿ ಮೆರವಣಿಗೆ ಹೊರಡುತ್ತಾಳೆ.

ಅಂದಿನ ರಾತ್ರಿಯ ಉತ್ಸವ ಬಹಳ ಮುಖ್ಯವಾದ 'ಗರುಡೋತ್ಸವ'.

ಆ ದಿನ ದೇಶದ ಮೂಲೆ ಮೂಲೆಗಳಿಂದ ಲಕ್ಷಾಂತರ ಜನ ತಿರುಮಲೆಯನ್ನು ಸೇರಿ ನಡುರಾತ್ರಿಯವರೆಗೆ ಸ್ವಾಮಿ ದರ್ಶನಾಕಾಂಕ್ಷಿಗಳಾಗಿ ಸಾವಧಾನದಿಂದ ಕಾಯುತ್ತಾರೆ. ಆ ದಿನ ಉತ್ಸವಮೂರ್ತಿಯನ್ನು 'ಲಕ್ಷ್ಮೀಹಾರ' 'ಮಕರಕಂಠಿಕೆ' ಮೊದಲಾದ ಅಪೂರ್ವ ಆಭರಣಗಳಿಂದ ಅಲಂಕರಿಸುತ್ತಾರೆ. ಆ ಸಮಯದಲ್ಲಿ ಸ್ವಾಮಿಯನ್ನು ದರ್ಶಿಸುವುದೊಂದಪೂರ್ವವಾದ ಅನುಭವ.

ಆರನೆಯ ಪ್ರಾತಃಕಾಲ "ಹನುಮಂತವಾಹನ" ಆ ಸಂಜೆ 'ವಸಂತೋತ್ಸವ'. ಈ ಉತ್ಸವಕ್ಕಾಗಿ ಮಲಯಪ್ಪಸ್ವಾಮಿ ಶ್ರೀದೇವಿ ಭೂದೇವಿಯರೊಡನೆ



ಸರ್ವ ಭೂಪಾಲ ವಾಹನ



ಮೋಹಿನೀ ಅವತಾರ



ಗರುಡ ವಾಹನ

ವಸಂತಮಂಟಪವನ್ನು ಸೇರಿ 'ತಿರುಮಂಜನ' ಆಸ್ಥಾನಗಳಾದ ಮೇಲೆ ಹಿಂತಿರುಗುತ್ತಾರೆ. ಅದೇ ದಿನ ರಾತ್ರಿ "ಗಜವಾಹನ".

ಏಳನೆಯದಿನ ಸ್ವಾಮಿಯವರು "ಸೂರ್ಯಪ್ರಭ" ರಾತ್ರಿ "ಚಂದ್ರಪ್ರಭ" ವಾಹನಗಳನ್ನಲಂಕರಿಸುತ್ತಾರೆ.

ಎಂಟನೆಯ ದಿನವೇ "ರಥೋತ್ಸವ". ಗರುಡೋತ್ಸವದಂತೆಯೇ ಈ ಉತ್ಸವಕ್ಕೂ ಜನಸಂದಣಿಯಿರುತ್ತದೆ. ಉದಯಕಾಲದಲ್ಲೇ ಮಲಯಪ್ಪಸ್ವಾಮಿಯವರು ಸರ್ವಾಲಂಕೃತರಾಗಿ ದೇವೇರಿಯೊಡನೆ ರಥದೊಳಗೆ ದಯಮಾಡಿಸುತ್ತಾರೆ. ಭಕ್ತಿಪರವಶರಾದ ಭಕ್ತಕೋಟಿ ಅಪರಿಮಿತವಾದ ಭಕ್ತಿಶ್ರದ್ಧೆಗಳಿಂದ ರಥವನ್ನೆಳೆಯುತ್ತಾರೆ. ರಥೋತ್ಸವದ ರಾತ್ರಿ "ಅಶ್ವವಾಹನ"ವಿರುತ್ತದೆ.

ಬ್ರಹ್ಮೋತ್ಸವದ ಕೊನೆಯ ದಿನವಾದ ಒಂಭತ್ತನೆಯದಿನ ಮೆರವಣಿಗೆಯಾದ ನಂತರ ಸ್ವಾಮಿ ಪುಷ್ಕರಿಣಿಯ ದಡದಲ್ಲಿರುವ ವರಾಹಸ್ವಾಮಿ ಆಲಯಕ್ಕೆ ಬಂದು ಅವಭೃಥಸ್ನಾನ (ತಿರುಮಂಜನ) ಮಾಡುತ್ತಾರೆ. ಸಹಸ್ರಾರು ಯಾತ್ರಿಕರು ಪುಷ್ಕರಿಣಿಯ ತೀರದಲ್ಲಿ ಕಾದಿದ್ದು ಚಕ್ರಸ್ನಾನದ ವೇಳೆಯಲ್ಲಿ ನೀರಿನಲ್ಲಿ ಮುಳುಗುತ್ತಾರೆ. ಸುದರ್ಶನಚಕ್ರ ಸ್ನಾನದ ಸಮಯದಲ್ಲಿ ಪುಷ್ಕರಿಣಿಯಲ್ಲಿ ಮುಳುಗಿದರೆ ಸಕಲ ಪಾಪಗಳು ನಾಶವಾಗುವುವೆಂದು ಪ್ರತೀತಿ. ಶ್ರೀಯವರು ಬಂಗಾರದ 'ತಿರುಚ್ಚಿ'ಯಲ್ಲಿ ದೇವಾಲಯಕ್ಕೆ ಹಿಂದಿರುಗುತ್ತಾರೆ. ಗರುಡ ಧ್ವಜಾವರೋಹಣ, ಮಂತ್ರಾಕ್ಷತೆಗಳ ವಿತರಣೆಯೊಡನೆ ಹತ್ತುದಿನಗಳ ಉತ್ಸವ ಮುಕ್ತಾಯ ಹೊಂದುತ್ತದೆ.

ಈ ಉತ್ಸವ ಸಮಯದಲ್ಲಿ ನಡೆಯು ಕಾರ್ಯಕ್ರಮಗಳ ಜೊತೆಗೆ ಪುರಾಣ ಹರಿಕಥಾಕಾಲಕ್ಷೇಪಗಳೂ, ಶಾಸ್ತ್ರೀಯಸಂಗೀತ ಕಛೇರಿಗಳೂ, "ಹಿಂದೂ ಧರ್ಮರಕ್ಷಣಸಂಸ್ಥೆಯ" ಆಧ್ವರ್ಯದಲ್ಲಿ ನಡೆಯುತ್ತವೆ.

ಮೂರು ವರುಷಗಳೊಂದುಬಾರಿ ಅಧಿಕ ಮಾಸವೊಂದು ಬರುತ್ತದೆ. ಆ ಸಂವತ್ಸರದಲ್ಲಿ ತಿರುಮಲೆಯಲ್ಲಿ ಆಶ್ವಯುಜಮಾಸದಲ್ಲಿ ನವರಾತ್ರಿಯಲ್ಲೂ ಒಂದು ಬ್ರಹ್ಮೋತ್ಸವ ಜರುಗುತ್ತದೆ. ಇದನ್ನು ಎರಡನೆಯ ಬ್ರಹ್ಮೋತ್ಸವವೆನ್ನುತ್ತಾರೆ. ವ್ಯತ್ಯಾಸವೇನೆಂದರೆ ಮೊದಲನೆಯ ಬ್ರಹ್ಮೋತ್ಸವದಲ್ಲಿರುವ ಧ್ವಜಾರೋಹಣ, ಎರಡನೆಯ ಬ್ರಹ್ಮೋತ್ಸವದಲ್ಲಿರುವುದಿಲ್ಲ. ಅದಲ್ಲದೆ ರಥೋತ್ಸವ ದಿನದಲ್ಲಿ, ಮರದಿಂದ ನಿರ್ಮಿತವಾದ ರಥವನ್ನೇರುವ ಸ್ವಾಮಿ ಎರಡನೆಯ ಬ್ರಹ್ಮೋತ್ಸವದಲ್ಲಿ ಬೆಳ್ಳಿಯ ರಥವನ್ನೇರಿ ಸೇವೆ ಪಡೆಯುತ್ತಾನೆ. ★



ಚಕ್ರಸ್ನಾನ (ಅವಭೃತೋತ್ಸವ)

(17 ನೇ ಪುಟದಿಂದ)

ಮಾರ್ಗದಲ್ಲಿ ಮುಂದುವರೆಯಲು ನಡೆ ನುಡಿಗಳನ್ನು ಸ್ಥಿರಗೊಳಿಸಿಕೊಂಡು ಪ್ರಾಪಂಚಿಕ ಸುಖಕ್ಕೆ ಬಲಿಯಾಗದೆ ಜಾಗ್ರತನಾಗಿರುವವನೇ ಜಾಣನು. ಎಲ್ಲಿಯವರೆವಿಗೆ ಮನುಷ್ಯನ ಬುದ್ಧಿಯು (ಅಂತಃಕರಣವು) ಕಾರ್ಯಾಕಾರ್ಯಗಳನ್ನು ವಿಂಗಡಿಸಿಕೊಂಡು ತಕ್ಕ ಕರ್ಮದಲ್ಲಿ ತೊಡಗುವುದೋ, ಅಲ್ಲಿಯವರೆವಿಗೆ ಮನುಷ್ಯನು ಮನುಷ್ಯ ನೆಂದೆಣಿಸಿಕೊಳ್ಳುತ್ತಾನೆ. ಹಾಗಿಲ್ಲದೆ ಬಯಕೆಯುಂಟಾಗುತ್ತಿದ್ದ ಹಾಗೆಯೇ ಅದನ್ನು ಪೂರೈಸಿಕೊಳ್ಳಲು ಉದ್ಯುಕ್ತನಾದರೆ ಅವನು ಮೃಗಕ್ಕೆ ಸಮಾನನೇ ಸರಿ. ಪ್ರತಿಯೊಬ್ಬರೂ ಬಯಸುವುದು ಸುಖವನ್ನೇ. ಈ ಸುಖವೆಂಬುದು ಯಾವ ವಸ್ತು ತಂತ್ರವಲ್ಲ, ಸರ್ವತಂತ್ರ ಸ್ವತಂತ್ರವಾದುದು. ಅಂದರೆ ಮನದ ಸಮಾಧಾನವೇ ಸುಖ. ತೃಪ್ತಿ ಅಂದರೆ ಶಾಂತಿ, ಶಾಂತಿಯಿದ್ದರೆ ಎಲ್ಲವೂ ಇದ್ದಂತೆ.

ಮನಸ್ಸಿಗೂ ಮತ್ತು ನಾವು ತೆಗೆದುಕೊಳ್ಳುವ ಆಹಾರಕ್ಕೂ ನಿಕಟವಾದ ಸಂಬಂಧವಿರುವುದರಿಂದ ನಾವು ಯಾವ ರೀತಿಯ ಆಹಾರವನ್ನು ಸೇವಿಸುತ್ತೇವೆಯೋ ಅದರಂತೆ ನಮ್ಮ ಮನೋಭಾವನೆಯು ಪ್ರಚೋದನೆಯಾಗುವುದರಿಂದ ಪೂರ್ಣ ಸತ್ತ್ವವಾದ ಸಾತ್ವಿಕ ಆಹಾರವು ಸೇವನೆಗೆ ಉತ್ತಮವಾದದು. ಉತ್ತಮ ಆಹಾರದಿಂದ ಉತ್ತಮಯೋಚನೆ, ಯುಕ್ತವಾದ ಕರ್ಮ, ಉತ್ತಮಕರ್ಮದಿಂದ ಉತ್ತಮಫಲ, ಹೀಗೆ ಒಂದಕ್ಕೊಂದು ಪೂರಕವಾಗಿಯೆ ಇವೆ. ಇದನ್ನೇ ಯೋಗವೆನ್ನುವುದು, ಗೀತೆಯಲ್ಲಿ ಪ್ರತಿಪಾದಿತವಾಗಿರುವುದೆಲ್ಲಾ ಯೋಗವೆಂದೇ ಹೇಳಲಾಗಿದೆ. ಜೀವಿಗೆ ಎಲ್ಲಿಯವರೆವಿಗೆ ಎಲ್ಲಾ ವಿಧವಾದ ಸುಖ ಸೌಲಭ್ಯಗಳು ಇದುತ್ತದೆಯೋ ಅಲ್ಲಿಯವರೆವಿಗೆ ಅದೇ ಶಾಶ್ವತವೆಂದೂ ತಿಳಿಯುವುದಲ್ಲದೆ, ಬೇರೆ ಇದಕ್ಕಿಂತ ಉತ್ತಮವಾದ ಶಾಶ್ವತ ಸುಖವಿದೆ, ಈ ಸುಖ ಸೌಲಭ್ಯಗಳನ್ನು ಕೊಟ್ಟಿರುವ ಕರುಣಾಮಯನಾದ ಭಗವಂತನೆಂಬುವನು ಒಬ್ಬನಿದ್ದಾನೆ, ಎಂದಾಗಲೀ ಅರಿಯದೆ ಅವನಿಗೆ ಅವನೇ ಸರಿಸಮಾನವಾಗಿ 'ಎಲ್ಲವೂ ನನಿಂದಾಯಿತು, ನಾನೇ ಮಾಡಿದೆ' ಎಂಬೀ ಅಹಂಕಾರ ಮಮಕಾರದಲ್ಲಿ ಮುಳುಗಿ ಅಂಧನಾಗಿರುತ್ತಾನೆ. ಆದರೆ ಈ ಭಾವನೆಗೆ ವಿರುದ್ಧವಾದ ತಾನು ಅಪೇಕ್ಷಿಸದೇ ಇರುವ ಅನಿರೀಕ್ಷಿತವಾದ ಆಘಾತವು ಬಂದೆರಗಿದಾಗ, ದೈವ ಧರ್ಮ ಕರ್ಮಗಳ ಭಾವವು ವೈರಾಗ್ಯದ ಅರಿವು ಉಂಟಾಗಿ ತನ್ನ ಯೋಗ್ಯತೆ ಏನು? ತಾನೆಷ್ಟರವನು? ಎಂಬ ತಿಳುವಳಿಕೆಯು ಉಂಟಾಗುತ್ತದೆ. ಇಂತಹ ಸಮಯವೇ ಪಾರಮಾರ್ಥಿಕ ತತ್ತ್ವವನ್ನು ತಿಳಿಯಲು ಸರಿಯಾದ ಸಮಯ.

ಪಾರ್ಥನು ಕೂಡ ಹೀಗೆ ಪೌರುಷದಿಂದ ಮಾತನ್ನಾಡಿ ಕೊನೆಗೆ ತನ್ನ ಸಾಮರ್ಥ್ಯದ ಅರಿವಾಗಿ ವ್ಯಥಿತನಾಗಿ, ಸರ್ವಕರ್ತನೂ, ಸರ್ವವ್ಯಾಪಕ ಚೈತನ್ಯನೂ ಆದ ಆ ಭಗವಂತನನ್ನು ಮರೆತಿದ್ದೆನಲ್ಲಾ ಎಂದು ವಿಷಾದಿಸುತ್ತಾನೆ. ಮನಸ್ಸು ದುಃಖದಲ್ಲಿ ಒಂದಾಗಿ ದುಃಖಿತನಾಗುತ್ತಾನೆ. ಇದೇ ವಿಷಾದಯೋಗ. ಇಲ್ಲಿ ಕೇವಲ ಒಣಮಾತಿನಿಂದ ಭಗವಂತನನ್ನು ಕೇಳುತ್ತಿಲ್ಲ, ಪಶ್ಚಾತ್ತಾಪದಿಂದ ಬೆಂದ ಹದವಾದ ಮನಸ್ಸಿನಿಂದ, ಭಗವಂತನೆಂದೂ, ಆಪ್ತನೆಂದೂ, ಹಿತವನ್ನೇ ಬೋಧಿಸುವವನೆಂದೂ ನಂಬಿ 'ನಾನು ನಿನ್ನ ಶಿಷ್ಯನು' ಎಂಬ ಭಕ್ತಿಹಾಗೂ ವಿಶ್ವಾಸವು ತ್ರಿಕರಣಪೂರ್ವಕವಾಗಿ ಕೇಳುತ್ತಿದ್ದಾನೆ. ಇದೇ ಆತ್ಮೋದ್ಧಾರವನ್ನು ಬಯಸುವವನಲ್ಲಿ ಇರಬೇಕಾದ ಮುಖ್ಯಲಕ್ಷಣವಾದ ನಂಬಿಕೆ. ಹೀಗೆ ನಿಶ್ಚಲ ನಂಬಿಕೆ (ತತ್ತ್ವ)ಯೇ ಜೀವನ್ಮುಕ್ತಿಗೆ ಸೋಪಾನ. ಹೀಗೆ ದೃಢ ಮನೋಭಾವನೆಯನ್ನು ಹೊಂದಿದ ಜೀವನು ತನಗೆ ಪ್ರಾಪ್ತಿಯಾವ ಕರ್ಮವನ್ನು ಪರಮಾತ್ಮನೇ ನಿಯೋಜಿಸಿರುವನು ಎಂಬೀ ದೃಢ ಮನೋನಿಶ್ಚಯನಾಗಿ ಮಾಡಬೇಕಾದ ಎಲ್ಲಾ ಕಾರ್ಯವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡುತ್ತಾ ಸತ್ವ ಶುದ್ಧಿಯಿಂದ ಪರಂಪರಾನುಗತವಾದ ಸಾಧನೆಯನ್ನು ಕೈಗೊಂಡು ನಿರ್ಲಿಪ್ತನಾಗಿರುತ್ತಾನೆ. ಹೀಗೆ ಮೋಕ್ಷ ಸಾಧನೆಗೆ ಸಾಧ್ಯತೆಯನ್ನು ತಿಳಿಸುವುದೇ ಗೀತೆಯ ಮುಖ್ಯಗುರಿಯಾಗಿದೆ. ಕರ್ಮರೂಪವಾದ ಪ್ರವೃತ್ತಿ ಧರ್ಮ, ಜ್ಞಾನ ವೈರಾಗ್ಯ ರೂಪವಾದ ನಿವೃತ್ತಿ ಧರ್ಮ, ಇವುಗಳನ್ನು ತಿಳಿಸುವುದಲ್ಲದೆ ವಾಸುದೇವನಾದ ಭಗವಂತನೇ ಸರ್ವಾತ್ಮನಾದ ಪರಬ್ರಹ್ಮನೆಂದೂ, ಈ ಪರಬ್ರಹ್ಮನೇ ಎಲ್ಲದರ ಒಳಗೂ ಹೊರಗೂ ವಿಶ್ವವ್ಯಾಪಕನಾಗಿ, ಅತ್ಯತ್ತಿಷ್ಠದ್ದಶಾಂಗುಲನಾಗಿ ಅರಿಯುವವನ ಆತ್ಮನೇ ಆ ಪರಬ್ರಹ್ಮನು ಎಂದು ತೋರಿಸುವುದೇ ಗೀತೆಯ ಗುಟ್ಟು ಎಂದರೆ ಅತಿಶಯೋಕ್ತಿ ಎನಿಸಲಾರದು. ★

ಸಂದರ್ಶಿಸಿ ಅನುಗ್ರಹೀತರಾಗಿ.



# ಶ್ರೀ ವೆಂಕಟೇಶ್ವರಸ್ವಾಮಿಯವರ ನವರಾತ್ರಿ ಬ್ರಹ್ಮೋತ್ಸವ, ತಿರುಮಲೆ.

| ತಾರೀಖು | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 16-10-82 | ಶನಿ | — | ಸೇನಾಧಿಪತಿ ಉತ್ಸವ, ಅಂಕುರಾರ್ಪಣೆ |
| 17-10-82 | ಭಾನು | ತಿರುಚ್ಚಿ ಉತ್ಸವ, | ದೊಡ್ಡ ಶೇಷವಾಹನ |
| 18-10-82 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 19-10-82 | ಮಂಗಳ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 20-10-82 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 21-10-82 | ಗುರು | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಮಕರಕಂಠಿ, ಸಹಸ್ರನಾಮಾವಳಿ, ಶ್ರೀಲಕ್ಷ್ಮೀ ಹಾರಾದ್ಯಾಭರಣ ನೂತನ ಮೇಲ್ಚಾತ್ತು ವಸ್ತ್ರಾಲಂಕಾರದೊಡನೆ **ಗರುಡವಾಹನ** |
| 22-10-82 | ಶುಕ್ರ | ಹನುಮದ್ವಾಹನ<br>ಸಂಜೆ : ವಸಂತೋತ್ಸವ | ಗಜವಾಹನ |
| 23-10-82 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 24-10-82 | ಭಾನು | ಬೆಳ್ಳಿಯ ರಥೋತ್ಸವ | ಅಶ್ವವಾಹನ |
| 25-10-82 | ಸೋಮ | ತಿರುಚ್ಚಿ ಉತ್ಸವ, ಅವಭೃತೋತ್ಸವ | — |

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

# ಮಹರ್ಷಿ ವಿಶ್ವಾಮಿತ್ರ

'ರಸಿಕ ಪುತ್ತಿಗೆ'

ಮಹರ್ಷಿ ವಸಿಷ್ಠರ ಕತೆಯಲ್ಲಿ ವಿಶ್ವಾಮಿತ್ರನನ್ನು ಕುರಿತು ಬಹಳಷ್ಟು ತಿಳಿದಿದ್ದೇವೆ. ಅತನೊಬ್ಬ ಕ್ಷತ್ರಿಯ ರಾಜ. ಕನ್ಯಾಕುಬ್ಜ ದೇಶದಲ್ಲಿ ಆತನ ರಾಜ್ಯವಿತ್ತು. ತಂದೆಯ ಹೆಸರು ಗಾಧಿರಾಜ.

ಆತ ರಾಜನಾಗಿದ್ದ ಕಾಲದಲ್ಲಿ ಒಮ್ಮೆ ಸೇನಾ ಸಮೇತನಾಗಿ ಮಹರ್ಷಿ ವಸಿಷ್ಠರ ಆಶ್ರಮಕ್ಕೆ ಹೋದ. ವಸಿಷ್ಠರ ಬಳಿ ಕಾಮಧೇನುವಿನ ಮಗಳು ನಂದಿನಿಯೆಂಬ ಆಕಳು ಇತ್ತು. ಕೇಳಿದುದನ್ನೆಲ್ಲಾ ಅದು ಕೊಡುತ್ತಿತ್ತು. ಅದರ ಸಹಾಯದಿಂದ ವಸಿಷ್ಠರು ಇಡೀ ಸೇನೆಗೆ ನಾನಾ ರೀತಿಯ ಭೋಜನ ನೀಡಿದರು.

ಇದನ್ನು ಕಂಡ ವಿಶ್ವಾಮಿತ್ರ – ದುರಾಸೆಯಿಂದ "ಆ ಆಕಳನ್ನು ನನಗೆ ಕೊಡಿ" ಎಂದ.

ವಸಿಷ್ಠರು ಕೊಡಲು ಒಪ್ಪಲಿಲ್ಲ. ಈಗ ವಿಶ್ವಾಮಿತ್ರನ ಅಪ್ಪಣೆಯಂತೆ ಆತನ ಸೈನಿಕರು ಆಕಳನ್ನು ಬಲತ್ಕಾರವಾಗಿ ಕೊಂಡೊಯ್ದರು. ಇದರಿಂದ ನಂದಿನಿ ಕುಪಿತಳಾಗಿ ಸಾವಿರಾರು ಸೈನಿಕರನ್ನು ಸೃಷ್ಟಿಸಿದಳು. ಅವರು ವಿಶ್ವಾಮಿತ್ರನ ಅಪಾರವಾದ ಸೇನೆಯನ್ನು ಓಡಿಸಿದರು. ಈ ಯುದ್ಧ ಬಹಳ ಕಾಲದವರೆಗೆ ನಡೆಯುತ್ತಿತ್ತು. ವಿಶ್ವಾಮಿತ್ರ ಪ್ರತಿಸಲವೂ ಸೋಲುತ್ತಿದ್ದ.

ಬಳಿಕ ವಿಶ್ವಾಮಿತ್ರ ಶಂಕರನನ್ನು ಕುರಿತು ತಪಸ್ಸು ಮಾಡಿ ದಿವ್ಯ ಅಸ್ತ್ರವನ್ನು ಪಡೆದ. ಆದರೆ ವಶಿಷ್ಠರ ಬಳಿ ಬ್ರಹ್ಮ ಬಲವಿದೆ. ವಿಶ್ವಾಮಿತ್ರನಿಂದೇನೂ ಆಗಲಿಲ್ಲ. ಆಗ ಅವನಿಗೆ ಅರಿವಾಯಿತು. "ಕ್ಷಾತ್ರ ಬಲಕ್ಕಿಂತ ಬ್ರಹ್ಮ ಬಲ ಹೆಚ್ಚಿನದು''. ಎಂದು. ಆದುದರಿಂದ ಆತ ತಪಸ್ಸುಮಾಡಿ ಬ್ರಾಹ್ಮಣನಾಗಲು ನಿಶ್ಚಯಿಸಿದ. ಬಹಳ ಕಾಲದವರೆಗೆ ಘೋರ ತಪಸ್ಸು ಮಾಡಿದ. ವಸಿಷ್ಠರೇ ಆತನನ್ನು ಬ್ರಹ್ಮರ್ಷಿಯನ್ನಾಗಿ ಮಾಡಬೇಕಿತ್ತು.

ವಿಶ್ವಾಮಿತ್ರನು ಅಹಂಕಾರಿಯಾಗಿ ತಪಸ್ಸು ಮಾಡುತ್ತಿದ್ದಾನೆಂದು ವಸಿಷ್ಠರು ಬಲ್ಲರು. ಆತನ ತ್ಯಾಗ ನಿಜವಾದುದಲ್ಲ. ಆದ್ದರಿಂದ ವಿಶ್ವಾಮಿತ್ರರನ್ನು ಬ್ರಹ್ಮರ್ಷಿ ಎಂದು ಅವರು ಒಪ್ಪಲಿಲ್ಲ.

ಇದನ್ನು ಕಂಡ ವಿಶ್ವಾಮಿತ್ರ ಕುಪಿತನಾಗಿ ಮಹರ್ಷಿ ವಸಿಷ್ಠರ ಪುತ್ರರನ್ನು ಕೊಂದು ಹಾಕಿದ. ಆದರೂ ವಸಿಷ್ಠರು ನಿಶ್ಚಲರಾಗಿದ್ದರು; ಕೊನೆಗೆ ಅವರನ್ನೇ ಕೊಲ್ಲುವ ಹಂಚಿಕೆ ಹಾಕಿದ ವಿಶ್ವಾಮಿತ್ರ.

ಒಂದು ದಿನ ಕತ್ತಲಾದ ನಂತರ, ವಸಿಷ್ಠರ ಕುಟೀರದ ಕಡೆ ಕಾಲು ಹಾಕಿದ. ವಿಶ್ವಾಮಿತ್ರ, ಕೊಲೆಗಾಗಿ. ದ್ವಾರದ ಬಳಿಗೆ ಹೋದಾಗ ವಸಿಷ್ಠರು ತಮ್ಮ ಮಡದಿಯೊಡನೆ ವಿಶ್ವಾಮಿತ್ರನ ಪ್ರಶಂಸೆ ಮಾಡುತ್ತಿದ್ದುದು ಕೇಳಿಸಿತು. ಆತನ ತಪಸ್ಸಿನ ಶಕ್ತಿಯನ್ನು ಹೊಗಳುತ್ತಿದ್ದರು. ವಿಶ್ವಾಮಿತ್ರ ಚಕಿತನಾಗಿ 'ನಾನೆಂತಹ ಕೆಟ್ಟವನು, ಸಲಸಲವೂ ತೊಂದರೆ ಕೊಡುತ್ತಿದ್ದೇನೆ. ಆದರೂ ವಸಿಷ್ಠರು ನನ್ನನ್ನು ಹೊಗಳುತ್ತಿದ್ದಾರೆ' ಎಂದು ಯೋಚಿಸಿ ಬಹಳ ದುಃಖಿತನಾದ. ಒಡನೆಯೇ ತನ್ನ ಆಯುಧವನ್ನು ಒಗೆದು ಒಳಗೆ ಹೋಗಿ ವಸಿಷ್ಠರ ಕಾಲುಗಳನ್ನು ಹಿಡಿದುಕೊಂಡ. ಒಡನೆಯೇ ವಸಿಷ್ಠರು ಆತನನ್ನು ಹಿಡಿದೆತ್ತಿ 'ಬ್ರಹ್ಮರ್ಷಿ ನೀನು ಹೇಗಿದ್ದೀ? ಕ್ಷೇಮ ತಾನೆ?' ಎಂದು ವಿಚಾರಿಸಿದರು.

ವಿಶ್ವಾಮಿತ್ರ ಹೇಳಿದ – "ಎಲ್ಲಾ ನಿಮ್ಮ ಕೃಪೆ. ಆದರೆ ನೀನು ಈ ತನಕ ನನ್ನನ್ನು ಬ್ರಹ್ಮರ್ಷಿ ಎಂದು ಏಕೆ ಹೇಳಲಿಲ್ಲ?"

ವಸಿಷ್ಠರು ಉತ್ತರಿಸಿದರು – "ಯಾಕೆಂದರೆ ನೀನು ನಿನ್ನ ಶಕ್ತಿಯ ಮದದಿಂದ ಬ್ರಾಹ್ಮಣ ಪದವಿ ಪಡೆಯಲು ಪ್ರಯತ್ನಿಸುತ್ತಿದ್ದೆ. ಆದರೆ ಈಗ ನಿನಗೆ ಪಶ್ಚಾತ್ತಾಪ



ವಾಗುತ್ತಿದೆ; ಇದೇ ಬ್ರಾಹ್ಮಣನ ನಿಜವಾದ ಗುರುತು''.

ಆ ದಿನದಿಂದ ವಿಶ್ವಾಮಿತ್ರ ಬ್ರಾಹ್ಮಣ ಪದವಿ ಪಡೆದು ಬ್ರಹ್ಮರ್ಷಿಯಾದ. ಈತ ವೇದ ಮಂತ್ರಗಳನ್ನು ರಚಿಸಿದ. ಎಲ್ಲಾ ಮಂತ್ರಗಳಲ್ಲೂ ಪವಿತ್ರ ಮಂತ್ರವಾದ ಗಾಯತ್ರಿಯನ್ನು ಈತನೇ ರಚಿಸಿದ.

ಬೇರೆ ಋಷಿಗಳ ಕುರಿತು ಪ್ರತೀತಿ ಇರುವಂತೆ 'ವಿಶ್ವಾಮಿತ್ರ' ನೆಂಬ ಹೆಸರೂ ಒಬ್ಬ ವ್ಯಕ್ತಿಯದಲ್ಲ. ಅದೂ ಒಂದು ಉಪಾಧಿ. ಪ್ರಾಚೀನ ಇತಿಹಾಸದಲ್ಲಿ ಹಲವಾರು ವಿಶ್ವಾಮಿತ್ರರು ಪ್ರಸಿದ್ಧರಾದರು.

ದಶರಥ ಮಹಾರಾಜನಿಂದ ರಾಮನನ್ನು ಪಡೆದು ಯಾಗ ರಕ್ಷಣೆ ಮಾಡಿಸಿ ರಾಕ್ಷಸರನ್ನು ಕೊಲ್ಲಿಸಿದ ವಿಶ್ವಾಮಿತ್ರನೊಬ್ಬನಿದ್ದ. ಆಗ ರಾಕ್ಷಸ ಜಾತಿಯ ಜನರು ಯಾಗ ಮಾಡಲು ಋಷಿಗಳಿಗೆ ಅವಕಾಶ ಕೊಡುತ್ತಿದ್ದಿಲ್ಲ. ರಾಮನು ಅಂಥವರನ್ನು ಕೊಂದಿದ್ದ. ರಾಮ ಲಕ್ಷ್ಮಣರಿಗೆ, ಆ ವಿಶ್ವಾಮಿತ್ರ ಯುದ್ಧ ವಿದ್ಯೆಯನ್ನು ಕಲಿಸಿದ. ಬಳಿಕ ಜನಕ ರಾಜನ ಬಳಿಗೆ ಕರೆದುಕೊಂಡು ಹೋಗಿ ಅಲ್ಲಿ ಸೀತಾ ರಾಮರ ವಿವಾಹ ಮಾಡಿಸಿದ.

ಮತ್ತೊಬ್ಬ ವಿಶ್ವಾಮಿತ್ರನಿದ್ದ. ಈತನೇ ರಾಜಾ ಹರಿಶ್ಚಂದ್ರನನ್ನು ಪರೀಕ್ಷಿಸಿದವನು.

(28 ನೇ ಪುಟ ನೋಡಿ)



# ಗೃಹಲಕ್ಷ್ಮಿ



# ಮಹಾಭಕ್ತೆ ಮೀರಾಬಾಯಿ

**ಎ. ಎಸ್. ಪಂಕಜ,** ಎಂ.ಎ.,ಬಿ.ಎಡ್.

ಪ್ರೇಮ ದಿವಾನಿ ಮೀರಾಬಾಯಿಯ ಕೃಷ್ಣಾನುರಕ್ತಿ ರಾಧೆಯ ಕೃಷ್ಣಾನುರಕ್ತಿಗಿಂತ ಕಡಿಮೆಯದಲ್ಲ. ಆದರೆ ತಾನು ಕೃಷ್ಣನ ಹ್ಲಾದಿನೀ ಶಕ್ತಿ ಎಂದು ಮೀರಾ ಎಲ್ಲಿಯೂ ಹೇಳಿ ಕೊಂಡಿಲ್ಲ. ಪುಷ್ಟಿ ಮಾರ್ಗಿಗಳು ಮುಕ್ತಾತ್ಮರಾಗಿ ಗೋಪಿಕಾ ರೂಪ ಧರಿಸಿ ಕೃಷ್ಣನೊಡನೆ ಲೀಲೆಯಾಡುತ್ತಾರೆ. ಆದರೆ ಮೀರಾಬಾಯಿಗೆ ರಾಧೆ, ಗೋಪಿಕಾ–ಇಂತಹ ಯಾವ ಮಾಧ್ಯಮವೂ ಬೇಕಿಲ್ಲ. ನೇರವಾಗಿ ಕೃಷ್ಣನೊಡನೆ ಇವಳು ವಿಹರಿಸುತ್ತಾಳೆ. ಕೃಷ್ಣನನ್ನು ಇವಳು ಮೊದಲು ಕಂಡದ್ದು ಕಣ್ಣು ಮುಚ್ಚಾಲೆಯಾಟ ಆಡುವಾಗ–

ಕುಂಜನ ಕುಂಜನ ಫಿರತ ರಾಧಿಕಾ,
ಸಬದ ಸುನತ ಮುರಲೀಕೋ
ಮೀರಾ ಕೇ ಪ್ರಭು ಗಿರಿಧರಸಾಗರ
ಭಜನ ಬಿನಾ ನರ ಫೀಕೋ

–ರಾಧೆಯು ನಿಜವಾಗಿಯೂ ಕೃಷ್ಣನ ಮುರಳಿಯ ನಾದ ಕೇಳಿ ವ್ರಜದೇಶದ ಗಲ್ಲಿ ಗಲ್ಲಿಯೂ ತಿರುಗಿದಳು. ಮೀರಳಾದರೋ ಕೃಷ್ಣನ ಮುರಳಿಯ ನಾದವನ್ನು ಕೇಳದೆಯೇ ಕೇಳಿದುದಕ್ಕಿಂತಲೂ ಮಿಗಿಲಾದ ಆನಂದವನ್ನು ಅನುಭವಿಸಿ ಊರೂರು ಅಲೆದವಳು.

ಶ್ರೀ ಕೃಷ್ಣನನ್ನು ವಶೀಕರಿಸುವ ಉಪಾಯ ಭಕ್ತಿಯು ಒಂದೆ. ಈ ಭಕ್ತಿ ಎರಡು ವಿಧ. 1) ವಿಧಿ ಭಕ್ತಿ 2) ರುಚಿಭಕ್ತಿ – ಇದು ರಾಗಾತ್ಮಿಕವಾದ್ದು ಮೀರಳದು ರಾಗಾತ್ಮಿಕಾಭಕ್ತಿ. ವಿಧಿ ಮರ್ಯಾದೆಯನ್ನು ಮೀರಿದ್ದು, ನವಧಾ ಭಕ್ತಿಯ ಬಂಧನಗಳು ಇದರಲ್ಲಿ ಇಲ್ಲ 'ಪೀಯಾ ಬಿನ ರಹೋ ನ ಜಾಯಿ' ಇದು ಶುದ್ಧ ರಾಗಾತ್ಮಿಕ ಭಕ್ತಿ. ಮೀರಳಿಗೆ ಕೃಷ್ಣ ಪ್ರೇಮ ಕರ್ತವ್ಯವಲ್ಲ, ಸಹಜಧರ್ಮ. ಇತರರಂತೆ ಅಲ್ಲ ಇವಳ ಪ್ರಿಯತಮ, ಇವಳ ಪ್ರಿಯತಮನು ಇವಳಲ್ಲೇ ರಮಿಸಿರುವನು.

"ಮೋರೇ ಪಿಯಾ ಮೇರೆ ಹಿಯ ಬಸತ ಹೈ" ಭಗವಂತನನ್ನು ಆನಂದಗೊಳಿಸಲು ನಿಸ್ವಾರ್ಥ ಪ್ರೇಮ ಭಾವನೆಯೇ ಸಮರ್ಥಾ ರತಿ. ವ್ರಜಗೋಪಿಯರ ಪ್ರೇಮ ಈ ತರಹದ್ದು. ಉತ್ಕರ್ಷ ಭಾವವೇ ರಾಧಾಭಾವ. "ರಾಧಾಭಾವ"ಕ್ಕಿಂತಲೂ ಒಂದು ಹೆಜ್ಜೆ ಮುಂದೆ ಮೀರಾಬಾಯಿಯ ಪದಗಳಲ್ಲಿ ವ್ಯಕ್ತವಾಗಿರುವ ಪ್ರೇಮಭಾವವನ್ನು "ಮೀರಾಭಾವ" ಎಂದು ಹೇಳಬಹುದು.

ವೀರಯೋಧರ ಜನ್ಮಭೂಮಿಯಾದ ರಾಜಾಸ್ಥಾನ ಮೀರಳಂತಹ ಭಕ್ತಳಿಗೆ ಜನ್ಮಸ್ಥಳವಾದದ್ದು ಹೆಮ್ಮೆಯ ವಿಷಯವೇ ಆಗಿದೆ. ಹುಟ್ಟು ಮನೆಯ ಧಾರ್ಮಿಕ ವಾತಾವರಣದಿಂದ ಮೀರಳ ಎಳೆಯ ಮನಸ್ಸಿನಲ್ಲಿ ಭಗವದ್ಭಕ್ತಿಯ ಬೀಜಾಂಕುರವಾಗಿ ಚಿಗುರತೊಡಗಿತು. ಅತ್ತೆ ಮನೆಗೆ ಬಂದನಂತರವೂ 'ಗಿರಿಧರಲಾಲ'ನ ಪೂಜಾರಾಧನೆಗಳಿಗೆ ಯಾವ ಅಡ್ಡಿಯಾಗಲಿಲ್ಲವಾದರೂ ದುರಾದೃಷ್ಟವಶಾತ್ ಬಹು ಚಿಕ್ಕ ವಯಸ್ಸಿನಲ್ಲಿಯೇ ವೈಧವ್ಯ ಇವಳ ಜೀವನದ ದಿಕ್ಕನ್ನೇ ಬದಲಾಯಿಸಿತು. "ಸ್ತ್ರೀಯರಿಗೆ ಯಾವ ಬಗೆಯ ಸ್ವಾತಂತ್ರ್ಯವೂ ಇಲ್ಲ; ಪುರುಷನ ಅಜ್ಞಾನುವರ್ತಿ ಅವಳು" ಎಂಬ ಭಾವನೆ ಇದ್ದ ಕಾಲದಲ್ಲಿಯೇ ಇವಳು ಎಲ್ಲಾ ಲೌಕಿಕ ಬಂಧನಗಳನ್ನು ಕುಡಿದುಹಾಕಿ ತನ್ನ ಮನಸ್ಸನ್ನು ಪೂರ್ಣವಾಗಿ ಗಿರಿಧರನಲ್ಲೇ ಅನುರಕ್ತಗೊಳಿಸಿಕೊಂಡಳು.

ಮೀರಾ ತನ್ನ ಪದಗಳಲ್ಲಿ ಪರಮಾತ್ಮನನ್ನು ಹಲವಾರು ಬಗೆಯಲ್ಲಿ ಹಾಡಿ ಸ್ತುತಿದ್ದಾಳೆ. ಇವಳು ನಾನಕ ಕಬೀರರಂತೆ ಕೃಷ್ಣನನ್ನು ನಿರ್ಗುಣ ಬ್ರಹ್ಮನೆಂದು ವರ್ಣಿಸುತ್ತಾಳೆ. ಅವಳ ಪ್ರಿಯತಮ ಗಗನ ಮಂಡಲದಲ್ಲಿ ಹಾಸಿಗೆ ಹಾಸಿ ಮಲಗುವವನು, ಅವನನ್ನು ತಲುಪುವಮಾರ್ಗ ಹಳ್ಳ ತಿಟ್ಟುಗಳಿಂದ ಕೂಡಿದ್ದು ಹತ್ತಿ ಹೋಗೋಣವೆಂದರೆ ಕಾಲೇ ನಿಲ್ಲುವುದಿಲ್ಲ. ಅಲ್ಲಿ ಕಳ್ಳಕಾಕರ ಭಯವೂ ವಿಶೇಷ. ಆದರೆ ಅವನು ದೂರವಿಲ್ಲ. ಅತ್ಯಂತ ಸಮೀಪವೇ, ತನ್ನ ಹೃದಯದಲ್ಲೇ ಇದ್ದಾನೆ. ಅವನು ಜೀವಾತ್ಮರೊಡನೆ ಕಣ್ಣು ಮುಚ್ಚಾಲೆ ಯಾಟ ಆಡುತ್ತಾನೆ. ಹೀಗೆ ನಿರ್ಗುಣ ಸಂತರ ಪರಮಾತ್ಮನಂತೆ ಮೀರಳ ಪರಮಾತ್ಮನೂ ವಿಶ್ವವ್ಯಾಪಿ, ಸರ್ವಾಂತರ್ಯಾಮಿ. ಇವಳ ಪ್ರೇಮವು ಮಾರ್ಗವು ಕೆಲವು ಕಡೆ ಸೂಫಿಸಂತರ ಪ್ರೇಮ ಮಾರ್ಗದಂತೆ ಪತಿ–ಪತ್ನಿ ರೂಪದ್ದು.

ಮೀರಳು 'ಮನರೇ ಪರಸ ಹರಿಕೇ ಚರಣ' ಎಂಬ ಪದದಲ್ಲಿ ಪ್ರಹ್ಲಾದ, ಧ್ರುವ, ಅಹಲ್ಯೆ, ಗೋಪಿಕೆಯರು – ಇವರಿಗೆ ಸದ್ಗತಿ ನೀಡಿದ ಕೃಷ್ಣ ಪತಿತಪಾವನ ಎಂದು ಮುಂತಾಗಿ ಸ್ತುತಿಸಿದ್ದಾಳೆ.

ಮೀರಳ ಜೀವನವೇ ಭಕ್ತಿ ಸಾಧನೆಯ ಪ್ರತೀಕ. ಬಾಲ್ಯದಿಂದಲೂ, ಮೀರಾ ಗಿರಿಧರನ ದಾಸಿ. ಹಾಡಿ ಕುಣಿದು ಅವನಲ್ಲಿ ರಮಿಸುವುದೇ ಅವಳ ಧರ್ಮ; ಅದೇ ಅವಳ ಜೀವನದುಸಿರು "ಮೈತೋ ಸಾಂವರೇ ಕೇ ರಂಗರಾಜೀ"– ನಾನು ಶ್ರೀ ಕೃಷ್ಣನ ಪ್ರೇಮದಲ್ಲಿ ಮುಳುಗಿದ್ದೇನೆ. ನಾನಂತೂ ಗಿರಿಧರನ ಮನೆಗೆ ಹೋಗುತ್ತೇನೆ ಎಂದು ಧೈರ್ಯವಾಗಿ ಹಾಡಿದಳು ಮೀರಾ. "ಮೇರಿ ಉನಕೀ ಪ್ರೀತ ಪುರಾನೀ" ಎಂದು ಹಾಡಿದ ಧೀರೆ. ವಾಸ್ತವವಾಗಿ ಮೀರಳ ಜೀವನವೇ ಕೃಷ್ಣಮಯವಾಗಿತ್ತು. ಅವಳ ಉಸಿರೇ ಕೃಷ್ಣ. ಅವನನ್ನು ನೋಡದೆ, ಭಜಿಸದೆ, ಹಾಡದೆ ಇರಲು ಅವಳಿಗೆ ಸಾಧ್ಯವಾಗುತ್ತಿರಲಿಲ್ಲ. ಅದ್ದರಿಂದಲೇ ಅವಳ ಸ್ವಜನರು ಕೊಟ್ಟಂತಹ ಕಷ್ಟಗಳೆಂಬ ಮುಳ್ಳುಗಳೂ ಗಿರಿಧರಗೋಪಾಲನ ಕೃಪೆಯಿಂದ ಪುಷ್ಪಗಳ ಹಾಸಿಗೆಯಾಯಿತು. ಕೊನೆಗೆ ಮೀರಾ ಎಲ್ಲಾ ಬಂಧನಗಳನ್ನು ಕಡಿದೊಗೆದು ರಾಧಿಕಾರಮಣನ ಕ್ರೀಡಾಂಗಣ ವೃಂದಾವನವನ್ನೇ ತನ್ನ ನಿವಾಸಸ್ಥಾನ ಮಾಡಿಕೊಂಡಳು.

"ಎಲೆ ಮನಸ್ಸೇ, ಇಂಥ ಹರಿಯ ಚರಣ ಸ್ಪರ್ಶ ಮಾಡು" ಎಂದು ಭಕ್ತಿ ವಿನಯ ಪೂರ್ವಕವಾಗಿ ಹೇಳಿದ್ದಾಳೆ. ಈ ಭಕ್ತಿ ಏಕಾಂತಿಕ ವಾದದ್ದು, ಪ್ರೇಮ ಪರಸ್ಪರವಾದದ್ದು, ಆತ್ಮೋತ್ಸರ್ಗಪೂರ್ಣವಾದದ್ದು. ವಾತ್ಸಲ್ಯ, ವಿನಯ, ಶ್ರದ್ಧೆ, ವಿರಹ, ದುಃಖ – ಈ ಎಲ್ಲ ಭಾವಪುಷ್ಪಗಳ ಮಾಲೆಯನ್ನೇ ಶ್ರೀಹರಿಯ ಕೊರಳಿಗೆ ಹಾಕಿ ಕಡೆಗೆ ತನ್ನನ್ನೇ ತಾನು ಮರೆಯುವಂತಹ ತ್ಯಾಗಮಯ ಪ್ರೇಮ ಮೀರಳದು,ಈ ಪ್ರೇಮಮಾರ್ಗ ಎಲ್ಲರಿಗೂ ಗ್ರಾಹ್ಯವಾದರೂ ಯಾರಿಗೂ ಅನುಕರಣ ಸಾಧ್ಯವಿಲ್ಲ.

ಮೀರಾ ತನ್ನ ಸ್ವಾಮಿಯನ್ನು ಕೆಲವು ಕಡೆ "ಯೋಗಿ" ಯೆಂದು ವರ್ಣಿಸಿದ್ದಾಳೆ. ಈ ಯೋಗಿಗಾಗಿಯೇ ತಾನೂ ಯೋಗಿಯಾದಳು. ಅವನನ್ನು ಪಡೆಯುವವರೆಗೆ ಅವಳಿಗೆ ಹಗಲು ಹಸಿವಾಗುವುದಿಲ್ಲ. ರಾತ್ರಿ ನಿದ್ರೆ ಬರುವುದಿಲ್ಲವಂತೆ, ಅವನನ್ನು ಒಂದು ಸಲ ಒಂದೇ ಒಂದು ಸಲ ನೋಡಬೇಕೆಂದು ಹಾತೊರೆಯುತ್ತಾಳೆ ಮೀರಾ. ನಾನು ಸತ್ತಮೇಲೆ ನನಗಾಗಿ ಅಲ್ಲ. ನನ್ನ ಪ್ರಿಯತಮನಿಗೋಸ್ಕರ, ಅಗರು ಚಂದನದ ಚಿತೆಯಮೇಲೆ ನನ್ನ ಶವಕ್ಕೆ ಅವನೇ ಅಗ್ನಿ ಸಂಸ್ಕಾರ ಮಾಡಲಿ.

ಆಮೇಲೆ ಆ ಬೂದಿಯನ್ನು ಅವನು ಮೈಗೆ ಲೇಪಿಸಿಕೊಳ್ಳಲಿ.ಹೀಗೆ ಜ್ಯೋತಿಯೊಂದಿಗೆ ನಾನು ಒಂದಾಗಬೇಕು. ಎಂದು ಅವಳ ಪ್ರಾರ್ಥನೆ. 'ನಿನ್ನನ್ನು ನೋಡದೆ ನನ್ನ ಮನಸ್ಸಿಗೆ ಶಾಂತಿ ಇಲ್ಲ. ನೀನು ಸಿಗುವುದೇ ಆದರೆ ನಾನು ನಿನಗಾಗಿ ಯೋಗಿಣಿಯಾಗಲೂ ಸಿದ್ಧ, ಕಾಶಿಗೆ ಹೋಗಿ ಗರಗಸದಿಂದ ತಲೆ ಕುಯ್ಯಿಸಿಕೊಳ್ಳಲು ಸಿದ' ಎನ್ನುತ್ತಾಳೆ. ಮೀರಳ ಕೆಲವು ಪದಗಳಲ್ಲಿ ಭಗವಂತನ ಸಗುಣ ರೂಪ ವರ್ಣಣೆ ಕಂಡು ಬರುತ್ತದೆ. ಗಿರಿಧರ ಸಾಗರನ ಎಲ್ಲ ವಿಶೇಷಗಳೂ ಒಂದೇ ಪದದಲ್ಲಿ ಕಂಡು ಬಂದಿದೆ–"ಹೇ ಕೃಷ್ಣ ನೀನು ನನ್ನ ಕಣ್ಣಲ್ಲೇ ಇರು. ನಿನ್ನ ಮೂರ್ತಿ ನನ್ನ ಮನವನ್ನು ಮೋಹಿಸಿದೆ, ಅದು ಅಷ್ಟು ಶೋಭಾಯಮಾನವಾಗಿದೆ. ನಿನ್ನ ವಿಶಾಲ ನೇತ್ರಗಳು, ಅಧರ ಸುಧಾರಸದ ಮೇಲೆ ರಾರಾಜಿಸುವ ಕೊಳಲು, ಎದೆಯ ಶೋಭಿಸುವ ವೈಜಯಂತಿಮಾಲೆ, ಗೆಜ್ಜೆಯಿಂದ ಶೋಭಿಸುವ ಕಟಿದಾರದ ಮಧುರಸ್ವನ–ಇವೆಲ್ಲ ಅತ್ಯಂತ ಆಕರ್ಷಣೀಯವಾಗಿದೆ. ಹೇ ಸ್ವಾಮಿ, ಭಕ್ತವತ್ಸಲನಾಗು" ಎಂದು ಬೇಡುವ ಮೀರಳು ಸಗುಣೋಪಾಸಕಳೆಂದೂ ಹೇಳಬಹುದು.

ಭಕ್ತಿ ಪಾರವಶ್ಯದಿಂದ ಹಾಡುವ ಮೀರಾ ರಾಮ ಕೃಷ್ಣ, ಗೋವಿಂದ, ಹರಿ ಇವರುಗಳಲ್ಲಿ ಭೇದ ಅರಿಯಳು. ರಾಮನಾಮ ತತ್ತ್ವವನ್ನು ರೂಪಕವಾಗಿ ಮೀರಾ ವರ್ಣಿಸಿದ್ದಾಳೆ.

"ಮೈನೇ ರಾಮರತನ ಧನ ಪಾಯೋ"
"ರಾಮನಾಮ ರಸ ಪೀಜೇ"
"ಲಗೀ ಮೋರೀ ರಾಮ ಖುಮಾರಿಹೋ"

ತುಳಸೀದಾಸರ ರಾಮಚರಿತಮಾನಸ ಸಮಸ್ತ ಹಿಂದೂ ಸಮಾಜವನ್ನೇ ರಾಮಮಯವಾಗಿ, ಸೂರದಾಸರ ಕೃತಿಗಳು ಇಡೀ ಸಮಾಜವನ್ನು ಕೃಷ್ಣಮಯವಾಗಿ ಮಾಡಿದರೆ, ಮೀರಳ ಪದಗಳಾದರೊ, ರಾಮಕೃಷ್ಣರಲ್ಲಿ ಭೇದ ಮಾಡದೆ ಪ್ರತಿಯೊಬ್ಬರ ಹೃದಯದಲ್ಲಿ ಆಧ್ಯಾತ್ಮಿಕ ಜ್ಯೋತಿಯನ್ನು ಬೆಳಗಿಸಿತು. ಮೀರಳ ಭಕ್ತಿಭಾವನೆಯು ಹೆಚ್ಚಾಗಿ ವಿನಯ ಮತ್ತು ವಿರಹ ನಿವೇದನಾಪೂರ್ಣವಾದದ್ದು; ಅವಳಿಗೆ ಪ್ರಿಯನನ್ನು ಕೂಡಬೇಕೆಂಬ ಒಂದೇ ಉತ್ಕಟ ಅಪೇಕ್ಷೆ, ಹಂಬಲ, ಮತ್ತು ಬಯಕೆ. 'ಹರಿಯಿಲ್ಲದ ನಾನು ಜೀವಿಸುವುದಾದರೂ ಎಂತು ? ಮರದಲ್ಲಿ ಕುಟ್ಟೆ ಹುಳು ಸೇರಿ ಅದನ್ನು ಪೊಳ್ಳಾಗಿಸುವಂತೆ ಪ್ರಿಯನ ವಿರಹ ನನ್ನನ್ನು ಪೊಟರೆಯಾಗಿಸಿದೆ, ಇದೂ ಒಂದು ರೋಗವೆಂದು ತಿಳಿದು ಕೊಟ್ಟ ಔಷದಿ ನನಗೆ ಹಿಡಿಯುವುದೇ ಇಲ್ಲ, – ಅವಳಿಗೆ ಹಿಡಿದಿರುವುದು ರೋಗವಲ್ಲ, ಪ್ರೇಮಾವೇಶ.

ಇವಳ ಜೀವನವೇ ಮಧುರ ಭಾವದ ಪ್ರತೀಕ, ಅದರಲ್ಲಿ ಮಿಕ್ಕಾವ ಭಾವಕ್ಕೂ ಎಡೆಯೇ ಇಲ್ಲ. ಗಿರಿಧರನ ದಾಸಿಯಾಗಿರಬೇಕು, ಅವನ ಸೇವೆ ಮಾಡಬೇಕು–ಇದೇ ಮೀರಳ ಧ್ಯೇಯ, ಗುರಿ. ಇದಕ್ಕಾಗಿಯೇ ಅವಳು ಹಾಡಿದ್ದಾಳೆ–"ಮನೇ ಚಾಕರ ರಾಖೋಜಿ" ಎಂದು. ಗಿರಿಧರನ ಚಾಕರಳಾದರೆ ಮೀರಳಿಗೆ ಲಾಭ ಉಂಟು–ಸೇವೆ, ಸ್ಮರಣೆ, ದರ್ಶನ. ಮೀರಳ ಹೃದಯಾಂತರಾಳದಲ್ಲೇ ಗಿರಿಧರನು ನೆಲಸಿದ್ದಾನೆ. ಇವಳ ಅಂತರಾತ್ಮದ ಪ್ರೇಮವೆಂಬ ಯಮುನಾ ನದೀ ತೀರದಲ್ಲಿ ಅರ್ಧ ರಾತ್ರಿಯಲ್ಲಾದರೂ ಇವಳಿಗೆ ದರ್ಶನ ಕೊಡುತ್ತಾನೆ ಗಿರಿಧರ. ಕೃಷ್ಣನಲ್ಲಿ ಅವಳ ಅನುರಾಗ ಎಷ್ಟು ಆಳವಾಗಿತ್ತೆಂದರೆ ಅವನು ಕರೆಯಲಿ ಬಿಡಲಿ "ನಾನಂತೂ ಗಿರಿಧರನ ಮನೆಗೆ ಹೋಗುತ್ತೇನೆ, ಅವನೇ ನನ್ನ ನಿಜವಾದ ಪ್ರಿಯತಮ" ಎಂದೂ ಯಾವ ಸಂಕೋಚವೂ ಇಲ್ಲದೆ ಹಾಡಿದ್ದಾಳೆ.

ಮೀರಳ ಕೃಷ್ಣವಿರಹದ ದುಃಖ ಅವಳ ಹೃದಯಕ್ಕೆ ಮಾತ್ರ ಗೊತ್ತು. ಮಿಕ್ಕವರಾರೂ ಅರಿಯರು. "ನಾನು ಕೃಷ್ಣ ವಿರಹದದುಃಖದಲ್ಲಿ ಹುಚ್ಚಿಯಾಗಿದ್ದೇನೆ. ನನ್ನ ಈ ನೋವನ್ನು ಯಾರೂ ತಿಳಿದಿಲ್ಲ. ಹೃದಯದಲ್ಲಿ ವಿರಹಾಗ್ನಿ ತಗುಲಿದವರೇ ಈ ನೋವನ್ನು ಅರಿಯಬಲ್ಲರು. ಶೂಲದ ಮೇಲಿನ ಹಾಸಿಗೆ ನನ್ನದು, ಮಲಗುವುದಾದರೂ ಹೇಗೆ, ಪ್ರಿಯತಮನ ಹಾಸಿಗೆ ಗಗನ ಮಂಡಲದಲ್ಲಿ, ಮಿಲನವಾಗುವುದು ಹೇಗೆ? ಈ ವಿರಹದ ನೋವಿನಿಂದ ಕಾಡು ಕಾಡು ಅಲೆಯುತ್ತಿದ್ದೇನೆ. ಇದನ್ನು ನಿವಾರಿಸುವ ವೈದ್ಯ ಇನ್ನೂ ಸಿಕ್ಕಿಲ್ಲ. ಸ್ವಯಂ ಕೃಷ್ಣನೇ ವೈದ್ಯನಾಗಿ ಬಂದು ಇದಕ್ಕೆ ಉಪಚಾರ ಮಾಡಿದಾಗಲೇ ಈ ನೋವು ತೀರುತ್ತದೆ" ಇದರಿಂದ ಅವಳ ಕೃಷ್ಣದರ್ಶನಾಕ್ಷಾಂಕ್ಷೆಯ ತೀವ್ರತೆ ವ್ಯಕ್ತವಾಗುತ್ತದೆ. ತನ್ನ ಪ್ರಿಯತಮನಿಗಾಗಿ ದಾರಿ ನೋಡುತ್ತಿರುವುದೇ ಅವಳ ದಿನಚರಿಯಾಗಿದೆ. ಅವನ ದಾರಿ ನೋಡಿ ನೋಡಿ ಅವಳ ಕಣ್ಣು ನೋಯ ತೊಡಗಿದೆ. ಅವನ ದರ್ಶನವಿಲ್ಲದೆ ಮನಶ್ಶಾಂತಿ ಇಲ್ಲ, ಯಾವ ಮಧುರ ಮಾತುಗಳನ್ನು ಕೇಳಿದರೂ ಅವಳಲ್ಲಿಯೂ ಅದೇ ಪ್ರತಿಕ್ರಿಯೆಯಾಗುತ್ತದೆ. ಅವನ ದರ್ಶನೋತ್ಕಂಠಿತಳಾದ ಮೀರಳಿಗೆ ಒಂದು ಕ್ಷಣವೂ ನೆಮ್ಮದಿ ಇಲ್ಲ, ರಾತ್ರಿಯೂ ಬಹುನಿಡಿದಾಗಿ ಕಾಣುತ್ತದೆ. ಆದ್ದರಿಂದ ಅವಳು ಮತ್ತೆ ಮತ್ತೆ ಪ್ರಾರ್ಥಿಸುತ್ತಾಳೆ–"ದುಃಖವನ್ನು ದೂರಮಾಡಿ ಸುಖದಾಯಿಯಾದ ನೀನು ನನಗೆ ಯಾವಾಗ ದರ್ಶನ ಕೋಡುತ್ತೀಯೆ ಪ್ರಭು?"

ಮೀರಾ ಮತ್ತು ಕೃಷ್ಣನ ಸಂಬಂಧ ಲೋಕಧರ್ಮದಷ್ಟೇ ಸನಾತನವಾದದು. ತಾನು ಕೃಷ್ಣನಿಗೆ ಸೇರಿದವಳು, ಕೃಷ್ಣ ಒಬ್ಬನೇ ತನಗೆ ಪ್ರಿಯ.



ಕೃಷ್ಣನಿಲ್ಲದೆ ಇವಳ ಪ್ರಾಣವೇ ಸುರಟಿ ಹೋಗುತ್ತದೆ, ನೀರಿಲ್ಲದ ಬಳ್ಳಿಯಂತೆ. ಜಾತಕದ ಕೂಜನದಲ್ಲೂ ಕೃಷ್ಣ ಸಂಬೋಧನೆಯನ್ನು ಕೇಳುತ್ತಾಳೆ. "ಎಲೆ ಜಾತಕವೇ, ನೀನು ನನ್ನ ಪ್ರಿಯತಮನ ಮಾತು ಅಡಬೇಡ. ವಿರಹಿಣಿಯು ನನ್ನ ಮಾತನ್ನು ಕೇಳಿದ್ದೇ ಆದರೆ ನಿನ್ನ ಕಣ್ಣನ್ನು ತಿರುಚಿ ಕಿತ್ತು ಬಿಟ್ಟಾಳು, ನಿನ್ನ ಕೊಕ್ಕು ಕತ್ತರಿಸಿ ಅದರ ಮೇಲೆ ಕರೀ ಉಪ್ಪು ಹಚ್ಚಿಯಾಳು"ಎನ್ನುವಳು. "ನಾನು ಪ್ರಿಯನಿಗೆ ಸೇರಿದವಳು, ಪ್ರಿಯತಮ ನನ್ನವನು ನೀನು ಪೀಪೀ ಎಂದು ಕೂಗುವುದು ಯಾವನನ್ನು? ನಿನ್ನ ಕೂಗೇನೋ ನನಗೆ ಹಿತ. ಅದು ನನ್ನ ಪ್ರಿಯತಮನಿಗೂ ಹಿತವಾಗಿದ್ದು, ನನ್ನ ಬಳಿ ಅವನು ಬಂದದ್ದೇ ಆದರೆ, ನಿನ್ನ ಕೊಕ್ಕಿಗೆ ಚಿನ್ನದ ಕೊಕ್ಕು ಮಾಡಿಸಿ ಹಾಕುತ್ತೇನೆ." ಇದು ಜಾತಕಕ್ಕೆ ಕೊಡುವ ಮೆಚ್ಚು.

"ತೇರೇ ಕಾರಣ ಜೋಗ ಲಿಯೋ ಹೈ......" 'ನಿನಗಾಗಿಯೇ ಯೋಗಿಯಾಗಿದ್ದೇನೆ, 'ಅಲಕ್ ಅಲಕ್' ಎಂದು ಬೀದಿ ಬೀದಿ ಅಲೆಯುತ್ತಿರುವುದು ನಿನಗಾಗಿಯಲ್ಲವೇ? ನೀನು ಬಂದು ದರ್ಶನ ಕೊಟ್ಟದ್ದೇ ಆದರೆ ಈ ವಿರಹಾಗ್ನಿ ನಂದೀತು.' ಎನ್ನುತ್ತಾಳೆ ಮೀರಾ. "ನೀನು ಹೇಳಿದ ಅವಧಿಯಲ್ಲಿ ಹಿಂದಿರುಗಲಿಲ್ಲ. ನಿನಗಾಗಿ ಕಾದು ಕಾದು ನನ್ನ ಕೂದಲೆಲ್ಲ ಬೆಳ್ಳಗಾಯಿತು" ಇದು ಲೌಕಿಕ ಪ್ರೇಮವಲ್ಲ, ಶೃಂಗಾರವಲ್ಲ. ಇದರಲ್ಲಿ ವ್ಯಕ್ತವಾಗಿರುವುದು ಅಲೌಕಿಕ ಪ್ರೇಮ. ತಲೆ ಕೂದಲು ನರೆತ ಮೀರಳನ್ನು ನೋಡ ಬರುವುದು ಅವಳ ಸೌಂದರ್ಯಕ್ಕಾಗಿಯಲ್ಲ, ಭಕ್ತಿಗಾಗಿ.

ಮೀರಳ ಪ್ರೇಮಾನುರಕ್ತಿ ಎಷ್ಟು ಆಳವಾದದ್ದು, 'ಎರಡು ರೆಕ್ಕೆ ಇದ್ದರೆ ಹಾರಿ ಕೂಡಲೇ ಪ್ರಿಯತಮನನ್ನು ಸೇರಿ ಕೊಂಡೇನು, ತನ್ನ ಪ್ರೇಮ ಸಂಧಂಧವನ್ನು ಅರಿತೂ ಅರಿತೂ ತನ್ನ ಬಳುವಿಕೆಯ ಸುಳಿವನ್ನು ಕೊಡಲಿಲ್ಲವಲ್ಲ, ಎಂಬುದೇ ಮೀರಳ

ದುಃಖ. ನಾನಷ್ಟೇ ಅವನ ದಾರಿನೋಡುತ್ತಿದ್ದರೂ ತನಗೆ ಕಾಣದಂತೆ ಒಂದು ವೇಳೆ ಪ್ರಿಯತಮನು ಬಂದೇ ಬಿಟ್ಟರೆ ಏನು ಗತಿ? ದಾರಿಯನ್ನು ಮೊದಲೇ ಗುಡಿಸಿ ಕಣ್ಣೀರಿಂದ ತೊಳೆದು ಸ್ವಚ್ಛ ಮಾಡೋಣ ಎಂದು ಹಾಡಿರುವಲ್ಲಿ ದೈನ್ಯಭಾವ ಮುಗಿಲು ಮುಟ್ಟಿದೆ. ಇದಕ್ಕಿಂತ ದೈನ್ಯ ಇರಲು ಸಾಧ್ಯವೇ ಇಲ್ಲವೆನ್ನಬಹುದು. ಪ್ರೇಮಾವೇಶದಲ್ಲಿ ಮೀರಾ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ತನ್ನ ಆರಾಧ್ಯ ದೇವತೆಯ ಎದುರಿಗೆ ನರ್ತಿಸುತ್ತಿದ್ದಳೆಂಬು ಅವಳ ಪದಗಳಿಂದಲೇ ವ್ಯಕ್ತವಾಗುತ್ತದೆ. ಅವಳ ಪ್ರೇಮಾವೇಶದ ಭರದಲ್ಲಿ ಅವಳು ಕುಡಿದ ವಿಷವೂ ಅಮೃತವಾಯಿತು. ಇದಕ್ಕೆ ಅವಳ ಭಕ್ತಿನಿಷ್ಠೆ ವಿಶ್ವಾಸಗಳೇ ಕಾರಣ. ಮೀರಳಿಗೆ ಪ್ರಿಯನ ಸಮಾಗಮವಾಗಿತ್ತು. ಇದು ಅವಳ ಪದಗಳಿಂದಲೇ ತಿಳಿಯುತ್ತದೆ. "………ಆಧಿರಾತ ಪ್ರಭು ದರಸಣ ದೈ ಹೈಂ ಪ್ರೇಮ ನದೀ ಕೇ ತೀರಾ" – 'ಅಂತರಾತ್ಮದ ಯಮುನಾನದೀ ತೀರದಲ್ಲಿ ಕೃಷ್ಣ ದರ್ಶನ ಕೊಡುತ್ತಾನೆ' 'ಮಿಲಬಿಛುರನ ಮತಕೀ ಜೋ ಜೀ…' –ಕೂಡಿ ಅಗಲಬೇಡ "

ಮೀರಾಬಾಯಿಯ ಭಕ್ತಿಯಲ್ಲಿ ಲೋಕಭಯ, ಲೋಕಲಜ್ಜೆಗಳು ಬಂಧನವಾಗಲಿಲ್ಲ. ಮೀರಾ ಸ್ವಯಂ ತಾನೇ ಕೃಷ್ಣನನ್ನು ಕ್ರೀಡಿಸಲು ಕರೆಯುತ್ತಾಳೆ. ಸೂರದಾಸರ ಸೂರಸಾಗರ ಕೃತಿಯಲ್ಲಿ ಕೃಷ್ಣನೇ ರಾಧೆಯನ್ನು ಕ್ರೀಡಿಸಲು ಕರೆದುಕೊಂಡು ಬರುವನೆಂಬ ವರ್ಣನೆಯಿದೆ. ಮೀರಳ ಮಾತು ದಾಷ್ಟಿಕವಾದದ್ದು. ಲೋಕಲಜ್ಜೆ, ಭಯ ಇಲ್ಲದಿರುವುದು, ತಾನು ನಿರಪರಾಧಿಯಾಗಿರವಾಗಲೇ. ಕೃಷ್ಣನಿಗೂ ಮೀರಳಿಗೂ ಯಾರೂ ಮಧ್ಯವರ್ತಿಗಳಿಲ್ಲ. ಗೋಪಿಕೆಯರಿಗೆ ಉದ್ಧವನು ಸಂದೇಶವಾಹಕ. ಕೃಷ್ಣಪ್ರೇಮ ಪ್ರಸಂಗದಲ್ಲಿ ಭ್ರಮರ ಗೀತೆ, ಉದ್ಧವ ಸಂದೇಶಗಳು ಪ್ರಸಿದ್ಧವಾದವು. ಮೀರಾ ಪದಗಳಲ್ಲಿ ಕಾಗೆಯಾಗಲಿ ಕೋಗಿಲೆಯಾಗಲಿ ಸಂದೇಶವಾಹಕವಲ್ಲ. ಇವಳ ಪ್ರಿಯನು ಇವಳ ಹೃದಯವಾಸಿ. ಆದ್ದರಿಂದ ಸಂದೇಶವಾಹಕಗಳ ಅವಶ್ಯಕತೆಯೇ ಇಲ್ಲವೆನ್ನಬಹುದು. "ಅಂಬಾ ಕೀ ಡಾಲೀ ಕೋ ಇಲ ಇಕ ಬೋಲೈ …" ಮತ್ತು "ರೇ ಪಪಇಯಾ ಪ್ಯಾರೇ ಕಬಕೋ ಬೈರ ಬಿತಾರ್‍ಯೋ" ಈ ಪದಗಳಲ್ಲಿ ಕೋಗಿಲೆಯ ಕೂಗಿನಿಂದ ತನ್ನಲ್ಲಿ ಉದಿಸಿದ ವಿರಹೋದ್ಗಾರ ಪ್ರೇಮೋದ್ಗಾರಗಳಿಯೇ ಹೊರತು ಸಂದೇಶ ಕಳಿಸುವ ಇಲ್ಲವೆ ತನ್ನ ಹೃದಯದ ನೋವು–ನಲಿವುಗಳನ್ನು ಇನ್ನೊಬ್ಬರಿಗೆ ತಿಳಿಸುವ ಗೋಜಿಗೆ ಮೀರಾ ಹೋಗಿಲ್ಲ. ಪ್ರಿಯತಮನು ಇಟ್ಟಂತೆ ಇರಬೇಕು ಎಂಬ ತನ್ನದೇ ಆದ ಒಂದು ಲಕ್ಷ್ಮಣ ರೇಖೆ ಯನ್ನು ಕಲ್ಪಿಸಿಕೊಂಡಿರುವ ಇವಳ ಭಕ್ತಿ ಅಸದೃಶವಾದದ್ದು. ಈ ರೇಖೆಯ ಗುರುತುಮಾತ್ರ ಅಗೋಚರ. ನೀರ ಮೇಲಿನ ದಾರಿಯಂತೆ ಮೀರಳ ಪ್ರೇಮಮಾರ್ಗ ಅನನುಸರಣೀಯ.

ಒಟ್ಟಿನಲ್ಲಿ ನಿರ್ಗುಣ ಭಕ್ತಿಯಲ್ಲಿರುವ ವಿಷಯಗಳನ್ನು ಉಪಯೋಗಿಸಿಕೊಂಡು ಸಗುಣ ಭಕ್ತಿಯ ಹಾಡುಗಳನ್ನು ಹಾಡಿದ ಭಕ್ತ ಕವಿಯತ್ರಿ ಮೀರ ಒಬ್ಬಳೇ. ಆದರೂ ಇವಳು ಸಂತಳಲ್ಲ, ಯೋಗಿನಿಯಲ್ಲ, ಸಂನ್ಯಾಸಿನಿಯಲ್ಲ. ಸಂತರ, ಯೋಗಿಗಳ, ಸಂನ್ಯಾಸಿಗಳ ಸಾಧನ ಸತ್ವಸಾರವೆನ್ನಲ್ಲ ಹೀರಿ, ಜೀರ್ಣಿಸಿ ಕೊಂಡು ಅದನ್ನು ಅನುಸರಿಸಿ ಸದಾಕಣ್ಣ ಮುಂದೆ ಕಟ್ಟಿ ನಿಂತಿರುವ ಕೃಷ್ಣನನ್ನೆ ಭಜಿಸಿ ಸ್ತುತಿಸಿ, ನಲಿಸಿ, ಉಂಟಾದಂಥ ಆನಂದದಲ್ಲೇ ಮುಕ್ತಳಾದ ವ್ಯಕ್ತಿ ಮೀರಾ ಎನ್ನುವುದು ಹೆಚ್ಚು ಸೂಕ್ತ.

---

( 25 ನೇ ಪುಟದಿಂದ )

ಈತ ಬಹಳ ಸಿಟ್ಟಿನವನು. ಈತನೇ ರಾಜಾ ತ್ರಿಶಂಕುವನ್ನು ನೇರವಾಗಿ ಸ್ವರ್ಗಕ್ಕೆ ಕಳಿಸುವ ಸಾಹಸ ಮಾಡಿದವನು.

ಕತೆ ಹೀಗಿದೆ: ವಸಿಷ್ಠರ ಶಿಷ್ಯನಾದ ತ್ರಿಶಂಕುರಾಜ ದೇಹ ಸಹಿತ ಸ್ವರ್ಗಕ್ಕೆ ಹೋಗಲು ಆಶಿಸುತ್ತಿದ್ದ. ರಾಜಾ ತ್ರಿಶಂಕುವಿನ ಹೆಸರು ಸತ್ಯವ್ರತನೆಂದು. ಮಾನವ ಸದೇಹನಾಗಿ ಸ್ವರ್ಗವೇರಲಾರ. ವಸಿಷ್ಠರು ಸಾಧ್ಯವಿಲ್ಲವೆಂದು ಹೇಳಿದರು. ಆಗ ಆತನು ವಿಶ್ವಾಮಿತ್ರನ ಬಳಿಗೆ ಬಂದ. ವಿಶ್ವಾಮಿತ್ರ ತಪೋಬಲದಿಂದ ಸತ್ಯವ್ರತನನ್ನು ಸ್ವರ್ಗಕ್ಕೆ ಕಳುಹಿಸಿದ. ಆದರೆ ದೇವತೆಗಳು ಆತನನ್ನು ಅಲ್ಲಿಂದ ತಳ್ಳಿದರು. ಬೀಳುತ್ತಿರುವಾಗ ಸತ್ಯವ್ರತ ವಿಶ್ವಾಮಿತ್ರನನ್ನು ನೆನೆದ. ಸಿಟ್ಟಿಗೆದ್ದ ವಿಶ್ವಾಮಿತ್ರ ತನ್ನ ತಪೋಬಲದಿಂದ ಬೀಳುತ್ತಿರುವ ಸತ್ಯವ್ರತನನ್ನು ತಡೆದ. ಇದರಿಂದ ಆತ ಮಧ್ಯದಲ್ಲಿ ತೂಗಾಡುವಂತೆ ಆಯಿತು. ಆದ್ದರಿಂದಲೇ ಆತನ ಹೆಸರು ತ್ರಿಶಂಕುವೆಂದಾಯಿತು. ವಿಶ್ವಾಮಿತ್ರ ಇಷ್ಟಕ್ಕೇ ನಿಲ್ಲಿಸಲಿಲ್ಲ. ಆತ ಹೊಸ ಸೃಷ್ಟಿಯನ್ನು ಆರಂಭಿಸಿದ. ತ್ರಿಶಂಕುವಿಗಾಗಿ ಒಂದು ಸ್ವರ್ಗವನ್ನು ರಚಿಸಿದ. ಆಗ ವಿಧಾತನು ಆತನ ಬಳಿಗೆ ಬಂದು ಹಲವಾರು ವಿಧದಿಂದ ತಿಳಿಹೇಳಿ ಹಾಗೆ ಮಾಡಬಾರದೆಂದು ತಡೆದ. ವಿಶ್ವಾಮಿತ್ರ ಪುನಃ ತಪಸ್ಸು ಮಾಡಲು ಹೊರಟ. ಯಾಕೆಂದರೆ ಸಿಟ್ಟನ್ನು ಗೆಲ್ಲದೆ ಬ್ರಹ್ಮರ್ಷಿ ಪದವಿ ಸಿಕ್ಕಲಾರದು.

ಈ ವಿಶ್ವಾಮಿತ್ರನ ಕುರಿತು ಹಲವು ಕತೆಗಳಿವೆ. ಒಮ್ಮೆ ಧರ್ಮನೇ ಮೊದಲಾದ ಕೆಲವಾರು ಋಷಿಗಳು ಬಂದು ವಿಶ್ವಾಮಿತ್ರನೊಡನೆ ಭೋಜನ ಕೇಳಿ ಸ್ನಾನಕ್ಕಾಗಿ ಹೊರಟವರು ನೂರು ವರ್ಷ ಬರಲೇ ಇಲ್ಲ. ವಿಶ್ವಾಮಿತ್ರ ಭೋಜನ ಸಿದ್ಧಪಡಿಸಿ ಕಾಯುತ್ತ ಕುಳಿತ. ಆಗ ಅವರು ಪ್ರತ್ಯಕ್ಷರಾಗಿ ಬ್ರಹ್ಮರ್ಷಿ ಪದವಿ ಕೊಟ್ಟರಂತೆ.

ಈ ಕತೆಗಳೆಲ್ಲಾ ಸತ್ಯವೇ ಸುಳ್ಳೋ ಯಾರೂ ತಿಳಿದಿಲ್ಲ. ಆದರೆ ಇವುಗಳ ಅರ್ಥವಿಷ್ಟು; ಸಿಟ್ಟನ್ನು ಗೆಲ್ಲದೆ ಮನುಷ್ಯ ಎಷ್ಟೇ ವಿದ್ವಾಂಸನಾದರೂ ದೊಡ್ಡವನೆನ್ನಿಸಿಕೊಳ್ಳಲಾರ. ವಿಶ್ವಾಮಿತ್ರ ಸಿಟ್ಟನ್ನು ಗೆಲ್ಲಲು ಘೋರವಾದ ತಪಸ್ಸುನ್ನಾಡಿ ಬ್ರಹ್ಮರ್ಷಿಯಾದ, ಮನುಷ್ಯ ಪ್ರಯತ್ನದಿಂದ ಏನನ್ನೂ ಸಾಧಿಸಬಲ್ಲನೆಂದು ತೋರಿಸಿಕೊಟ್ಟ. ಆದರೆ ಪ್ರಯತ್ನ ನಿಷ್ಠೆಯಿಂದ ಕೂಡಿರಬೇಕು. ಈ ರೀತಿ ಪ್ರಯತ್ನಿಸಿದುದರಿಂದಲೇ ವಿಶ್ವಾಮಿತ್ರ ಸಪ್ತಋಷಿಗಳಲ್ಲಿ ಸ್ಥಾನ ಪಡೆದ.

– ( ವಿವಿಧ ಮೂಲಗಳಿಂದ )





# ದಯಾನಂದ ಸರಸ್ವತಿ

ಮಹರ್ಷಿ ದಯಾನಂದ ಸರಸ್ವತಿಯವರು ಮತಾಚಾರ್ಯರಲ್ಲ, ನವೀನಮತ ಪ್ರವರ್ತಕರೂ ಅಲ್ಲ. ಅವರು ಸಮಸ್ತ ಮತ ಮತಾಂತರಗಳ ವಿಧ್ವಂಸನ ಹಾಗೂ ಏಕಮಾತ್ರ ಸಾರ್ವಭೌಮ ಧರ್ಮದ ಪ್ರಶಂಸನಕ್ಕಾಗಿ ಜಗತ್ತಿನಲ್ಲಿ ಉದ್ಭವಿಸಿದ ಒಬ್ಬ ನಿರ್ಮೋಹಿಗಳೂ, ಪೂರ್ಣನಿಷ್ಪಕ್ಷರೂ, ಉದಾರತಮರೂ ಆದ ಮಹರ್ಷಿಗಳು". "ಇವರ ಕೈಯ್ಯಲ್ಲಿ ಮಾತ್ರವೇ ವೇದಗಳ ಪುಸ್ತಕವಿರಲಿಲ್ಲ, ನಾಲಿಗೆಯ ಮೇಲೆ ಮಾತ್ರವೇ ವೇದಮಂತ್ರಗಳಿರಲಿಲ್ಲ, ಆಚರಣೆಯಲ್ಲಿ ವೇದ ತತ್ತ್ವವೇ ಒಡಮೂಡುತ್ತಿತ್ತು. ಇವರ ಬುದ್ಧಿ ಬೆಳಗುತ್ತಿದ್ದುದು ವೇದ ಜ್ಯೋತಿಯಿಂದ, ಮನಸ್ಸು ಮೆಲಕು ಹಾಕುತ್ತಿದ್ದುದು ವೇದತತ್ತ್ವಗಳನ್ನು, ಹೃದಯ ತುಂಬಿ ತುಳುಕುತ್ತಿದ್ದುದು ವೈದಿಕಭಾವನೆಗಳಿಂದ".

ಭಾರತದೇಶ ಮಹರ್ಷಿಗಳ, ತಪಸ್ವಿಗಳ, ಯೋಗಿಗಳ, ಧರ್ಮಪ್ರವರ್ತಕರ ನೆಲೆವೀಡು. ಇಂತಹ ಮಹಾತ್ಮರುಗಳ ಸಾಲಿನಲ್ಲಿ ವೈದಿಕ ಧರ್ಮೋದ್ಧಾರಕರೂ, ಆರ್ಯಸಮಾಜ ಸಂಸ್ಥಾಪಕರೂ ಆದ ದಯಾನಂದ ಸರಸ್ವತಿಯವರು ದೇದೀಪ್ಯಮಾನವಾಗಿ ಪ್ರಜ್ವಲಿಸಬೇಕಾದವರು. ಹಿಂದೂಗಳಾದ ನಾವು ಇಂತಹ ಮಹಾತ್ಮರ ವಿಷಯ ತಿಳಿಯದಿದ್ದರೆ ನಮ್ಮ ಜೀವನವೇ ನಿರರ್ಥಕ.

ಕರ್ಷನ್‌ಜೀ, ಅಮೃತಬಾಯಿಯವರಂಥ ಆದರ್ಶದಂಪತಿಗಳಲ್ಲಿ, 1824 ನೇ ಇಸವಿಯಲ್ಲಿ, ದಯಾನಂದರು ದೈವದಕೊಡುಗೆಯಾಗಿ ಜನಿಸಿ 'ಮೂಲಶಂಕರ' ನೆಂಬ ನಾಮಾಂಕಿತದಿಂದ ಉಜ್ಜ್ವಲಶಾಂತಿಯುತರಾಗಿ ಬೆಳಗುತ್ತಿದ್ದರು. ಇವರಿಗೆ 'ದಯಾರಾಮ'ನೆಂಬ ಹೆಸರೂ ಇತ್ತು. ಐದು ವರ್ಷದಲ್ಲೇ ಇವರಿಗೆ ಅಕ್ಷರಾಭ್ಯಾಸವಾಯಿತು. ಎಂಟನೇ ವರ್ಷದಲ್ಲಿ ಯಜ್ಞೋಪವೀತ ಸಂಸ್ಕಾರವೂ ಮುಗಿಯಿತು. ಕುಲಪರಂಪರಾಗತ ಸಂಧ್ಯಾವಂದನೆಯೊಂದಿಗೆ ವ್ರತೋಪವಾಸಗಳ, ಪೂಜಾವಿಧಾನಗಳ ಪರಿಚಯವೂ ಆಯಿತು. ತಂದೆಯ ಮಾತಿಗೆ ಎದುರಾಡದಿದ್ದರೂ ಇವರ ಮುಖಭಾವ ಕರ್ಮಕಾಂಡದಲ್ಲಿ ಅಭಿರುಚಿಯಿಲ್ಲವೆಂಬುದನ್ನು ತೋರಿಸುತ್ತಿತ್ತು ಚಿಕ್ಕಪ್ಪನ ಕೃಪೆಯಿಂದ ಚಿಕ್ಕ ವಯಸ್ಸಿನಲ್ಲೇ ಸಂಪೂರ್ಣ ಯಜುರ್ವೇದವನ್ನು ಬಾಯಿಪಾಠ ಮಾಡಿದರು. ಚಿಕ್ಕಪ್ಪನೊರ್ವನೇ ಇವರ ಉಜ್ಜ್ವಲ ಭವಿಷ್ಯವನ್ನು ಊಹಿಸಿದ್ದವರು.

ಇವರ ಕಿಶೋರಾವಸ್ಥೆಯಲ್ಲಿ ನಡೆದ ಒಂದು ಘಟನೆಯಿಂದಲೇ ಇವರು ಮೂರ್ತಿಪೂಜನ ಹಾಗೂ ವ್ರತೋಪವಾಸಗಳಲ್ಲಿ ಅನಾಸಕ್ತರೆಂಬುದನ್ನು ನಾವು ಮನಗಾಣಬಹುದು. ಆ ಘಟನೆಯನ್ನು ಇಲ್ಲಿ ಉದಾಹರಿಸುವುದು ಅಪ್ರಾಸಂಗಿಕವಾಗಲಾರದು.

ವ್ರತೋಪವಾಸಗಳಲ್ಲಿ ನಿಷ್ಠಾವಂತ ಹಠವಾದಿಗಳಾದ ಇವರ ತಂದೆಯವರು ಒಮ್ಮೆ ಶಿವರಾತ್ರಿಯಲ್ಲಿ ಮಗನಿಗೆ ಉಪವಾಸ, ಜಾಗರಣೆ ಮಾಡಬೇಕೆಂದು ಕಟ್ಟಾಜ್ಞೆ ಮಾಡಿದರು. ಆಗದೆಂದರೂ ಕೇಳದೆ ಹಲವಾರು ಶೈವ ಸತ್ಪುರುಷರ ಕಥೆ ಹೇಳಿ ಮಗನನ್ನು ಒಪ್ಪಿಸಿದರು. ಒಪ್ಪಿಕೊಂಡ ನಮ್ಮ ಕಥಾನಾಯಕರು ಬೆಳಿಗ್ಗೆ ಉಪವಾಸಮಾಡಿ ರಾತ್ರಿ ನಿಶ್ಚಲ ಚಿತ್ತದಿಂದ ಜಾಗರಣೆ ಮಾಡಲು ಶಿವನೆದುರಿಗೇ ಕುಳಿತರು. ನಾಲ್ಕಾರು ಇಲಿಗಳು ಎಲ್ಲಿಂದಲೋ ಬಂದು ಭಕ್ತರು ಶಿವಲಿಂಗದ ಮೇಲೆ ರ್ಪಿಸಿದ್ದ ಪತ್ರಪುಷ್ಪಾದಿಗಳನ್ನು ಚದುರಿಸಿ ಎದುರಿಗಿದ್ದ ನೈವೇದ್ಯವನ್ನುಂಡು ಉಲ್ಲಾಸದಿಂದ ಕುಣಿಯುತ್ತಿದ್ದವು. ಇದನ್ನು ಕಂಡು ಇವರ ಸುಪ್ತ ಚೇತನ ಜಾಗೃತವಾಗಿ ಈ ಲಿಂಗ ತಂದೆಯವರು ಬಣ್ಣಿಸಿದ ಮಹಾಶಕ್ತಿಶಾಲಿ ಚೇತನವಾಗಿದ್ದರೆ ಕ್ಷುದ್ರ ಮೂಷಿಕಗಳನ್ನು ಬದಿಗಟ್ಟುವ ಶಕ್ತಿ ಇರಲಿಲ್ಲವೇ? ಎಂದು ಯೋಚಿಸಿ ತಮ್ಮ ತಂದೆಯವರಲ್ಲಿ ಈ ರೀತಿ ಕೇಳಿದರು: "ಪಿತೃದೇವಾ! ತಾವು ಹೇಳಿದ ಮಹಾದೇವನು ಇವನೋ? ಅಥವಾ ಈ ಲಿಂಗ ಬೇರೇನಾದರೂ ಪದಾರ್ಥವೋ? ಅದಕ್ಕೆ ತಂದೆಯು "ವತ್ಸ! ನಿನ್ನ ಮಾತು ಸತ್ಯ. ಎದುರಿಗಿರುವುದು ವಿಗ್ರಹವೇ ಹೊರತು ಶಿವನಲ್ಲ. ವಿಗ್ರಹದಲ್ಲೇ ಶಿವಭಾವನೆ ಮಾಡಿಕೊಂಡು ಅರ್ಚಿಸಿದರೆ ಶಿವನು ಪ್ರಸನ್ನನಾಗಿ ಮುಕ್ತಿ ಕೊಡುವನು" ಎಂದು ಹೇಳಿದರು. ಇದಕ್ಕೆ ದಯಾನಂದರಿಗೆ ಮನಸ್ಸಿನಲ್ಲೇ ಈ ರೀತಿ ಕುದಿಯುತ್ತಿತ್ತಂತೆ; 'ಪ್ರತಿಮೆಯಲ್ಲಿ ಶಿವಭಾವನೆ ಮಾಡಿಕೊಳ್ಳುವ ಬದಲು, ಪೂಜೆ ಮಾಡಿದೆವೆಂದೇ ನೇರವಾಗಿ ಭಾವನೆಮಾಡಿಕೊಂಡು ಈ ನಿರರ್ಥಕ ಪೂಜಾವಿಧಾನದಿಂದಲೇ ವಿಮುಕ್ತರಾಗಬಹುದಲ್ಲ' ಎಂದು.

ಶ್ರೀಮತಿ ಪ್ರೇಮಲೀಲಾ
ನಾರಾಯಣಮೂರ್ತಿ

ಇವರಲ್ಲಿ ವೈರಾಗ್ಯ ಮೂಡಲು ಹಾಗೂ ಸಾವಿನ ಬಗ್ಗೆ ಆಳವಾದ ಯೋಚನೆ ಪುಟಿಯಲು ಇವರ ಸಹೋದರಿಯ ಹಾಗೂ ಮತ್ತು ಚಿಕ್ಕಪ್ಪನ ಸಾವುಗಳೇ ಕಾರಣವಾಗಿದ್ದವು. "ಮೃತ್ಯು ವಿಜಯ ಅಮರಪದಪ್ರಾಪ್ತಿ" ಇದನ್ನೇ ನಿರಂತರವಾಗಿ ಜಪಿಸುತ್ತಾ ಲೌಕಿಕ ವಿಷಯಗಳಲ್ಲಿವರಿಗಿದ್ದ ಅಲ್ಪಸ್ವಲ್ಪ ಅಭಿರುಚಿಯೂ ಸಂಪೂರ್ಣ ಇಳಿಮುಖವಾಯಿತು. ಇದನ್ನರಿತ ಮಾತಾಪಿತೃಗಳು ಇವರನ್ನು ವಿವಾಹವೆಂಬ ಚಿನ್ನದ ಸರಪಳಿಯಿಂದ ಬಂಧಿಸಿ ಸಾಂಸಾರಿಕ ವಿಷಯಗಳಲ್ಲಿ ಆಸಕ್ತಿ ಮೂಡಿಸುವ ಉಪಾಯ ಹೂಡಿದರು. ಇಂತಹ ಸುವರ್ಣ ಪಂಜರದಿಂದ ಬಿಡುಗಡೆ ಹೊಂದಲು ಎಷ್ಟೋ ಉಪಾಯಗಳನ್ನು ಹೂಡಿದರೂ, ಎಲ್ಲವೂ ನಿರರ್ಥಕವಾಗಿ ಕೊನೆಗೆ ವಿವಾಹ ನಿಶ್ಚಯವಾಗಿ ಕಾರ್ಯಕ್ರಮಗಳು ವಿಜೃಂಭಣೆಯಿಂದ ಸಾಗತೊಡಗಿದವು. ಬೆಕ್ಕಿನಕೈಗೆ ಸಿಕ್ಕ ಇಲಿಯ ತೆರ ಒದ್ದಾಡುತ್ತಾ ದಾರಿಗಾಣದೆ ದಿಗ್ಭ್ರಾಂತರಾಗಿ ಕೊನೆಗೆ ಮನೆಬಿಟ್ಟು ಹೊರಡುವ ನಿಶ್ಚಯಮಾಡಿದರು, ಅಂತೆಯೇ ಕರ್ತವ್ಯದಲ್ಲಿ ಜಯಶಾಲಿಗಳೂ ಆದರು.

ನಿಶ್ಚಲಚಿತ್ತರಾಗಿ ಹಿಂದು ಮುಂದು ನೋಡದೆ ಸದ್ಗುರು ಶೋಧನೆಯ ಒಂದೇ ಗುರಿಯನ್ನು ಮುಂದಿಟ್ಟುಕೊಂಡು ದಾರಿಸಾಗಿಸುತ್ತಿದ್ದರು. ತಮ್ಮಲ್ಲಿದ್ದ ಅಲ್ಪಸ್ವಲ್ಪ ಒಡವೆಗಳನ್ನೂ ದಾನಬೇಡಿದ ಬೈರಾಗಿಗಳಿಗೆ ಕೊಟ್ಟು, ಮತ್ತೆ ಬ್ರಹ್ಮಚಾರಿಯೋರ್ವರ ಪ್ರೇರೇಪಣೆಯಂತೆ ಹಳದಿಯ ಪಂಚೆಯನ್ನು, ಕಾವಿಯ ಕಪನಿಯನ್ನೂ ತೊಟ್ಟು, ಕರದಲ್ಲಿ ಕಮಂಡಲ ಹಿಡಿದು 'ಬ್ರಹ್ಮಚಾರಿ ಶುದ್ಧಚೈತನ್ಯ' ನೆಂಬಂಕಿತ ಧರಿಸಿದರು. ಇವರ ದೃಢತೆಯನ್ನು ಪರೀಕ್ಷಿಸುವುದಕ್ಕೋಸ್ಕರವೇ ಎಂಬಂತೆ ಇವರು ನೈಷ್ಠಿಕ ಬ್ರಹ್ಮಚಾರಿಗಳಾದ ಕೆಲವೇದಿನಗಳಲ್ಲಿ ಇವರ ತಂದೆಯ ದರ್ಶನವಾಯಿತು. ಅವರಿಂದ ಕಟುವಾದ ನಿಂದೆಗಳನ್ನು ಕೇಳಿದರು. ಅವರು ಸಿಪಾಯಿಗಳನ್ನು ಕಾವಲಿರಿಸಿ ಮಗನನ್ನು ಮನೆಗೆ ಕರೆದುಕೊಂಡು ಹೋಗುವ ಯೋಜನೆ ಹಾಕಿದರು. ಅವರ ಯೋಜನೆ ಸಂಪೂರ್ಣ

ನಿಷ್ಫಲವಾಯಿತು. ಇದರಿಂದ ಬೇಸತ್ತ ಕರ್ಜನ್ ಜೀಯ ಮನೆತನದ ದೀಪಗಳೆಲ್ಲಾ ಒಂದೊಂದಾಗಿ ನಂದಿಹೋದವು.

ದೃಢಮನಸ್ಸುಳ್ಳ, ಜ್ಞಾನಪಿಪಾಸುವಾದ ಶುದ್ಧ ಚೈತನ್ಯರ ಗುರು ಸಂಶೋಧನೆಯ ಪರ್ಯಟನೆ ಎಡಬಿಡದೆ ಸಾಗುತ್ತಿತ್ತು. ಅನೇಕ ಸಾಧುಸಂತರ, ಯೋಗಿಗಳ, ದರ್ಶನ, ಉಪದೇಶ, ಅಧ್ಯಯನ ಮುಂತಾದುವುಗಳಿಂದ ಇವರ ಜ್ಞಾನಪಿಪಾಸೆ ಹಿಂಗಲಿಲ್ಲ, ಯೋಗಾಭ್ಯಾಸದ ಕಾಮನೆ ಕಡಿಮೆಯಾಗಲಿಲ್ಲ. ಇವರಿಗೆ ಸನ್ಯಾಸ ಸ್ವೀಕರಿಸುವ ಅಭಿಲಾಷೆಯಂಕುರಿಸಿತು, ಅದರಂತೆ ಪೂರ್ಣಾನಂದ ಸರಸ್ವತಿಯವರಿಂದ ವಾದಮಾಡಿ ಸನ್ಯಾಸ ಸ್ವೀಕರಿಸಿ 'ದಯಾನಂದ ಸರಸ್ವತಿ' ಎಂಬ ನಾಮವನ್ನು ಹೊಂದಿದರು. ಅನೇಕ ಯೋಗಿಗಳನ್ನು ಸಂಧಿಸಿ ಆಧ್ಯಾತ್ಮ ತತ್ತ್ವಗಳ ಬಗ್ಗೆ ವಿಚಾರ ವಿನಿಮಯಮಾಡಿ ಯೋಗದ ಗೂಢರಹಸ್ಯಗಳನ್ನು ತಿಳಿದುಕೊಂಡು ಸಾಧನೆಯಲ್ಲೂ ತೊಡಗಿದರು. ಇಷ್ಟಾದರೂ ಇವರ ಮನಸ್ಸು ಅತೃಪ್ತಿಯನ್ನೇ ಸೂಸುತ್ತಿತ್ತು, ಯೋಗ್ಯ ಗುರುಗಳ ಸಂಶೋಧನೆಯಲ್ಲೇ ತೊಡಗಿತ್ತು. ಕೇದಾರ, ಬದರಿ, ಹಿಮಾಲಯ ಎಲ್ಲಾ ಮುಗಿದರೂ ಸದ್ಗುರುಗಳ ದರ್ಶನ ಸಿಗಲಿಲ್ಲ. ಆಗ ಮನಸ್ಸಿನಲ್ಲಿ ಅವರು "ಗಂಗೆ ನನ್ನ ತೃಷೆ ತೀರಿಸಲಾರದೇ ಹೋದಳು, ನರ್ಮದೆಯಾದರೂ ಸಫಲಳಾದಾಳೋ ?" ಎಂದರಿದುಕೊಂಡರಂತೆ.

ಪುರುಷಪ್ರಯತ್ನವಿದ್ದಲ್ಲಿ ದೈವಬೆಂಬಲವಿದ್ದೇ ಇರುವುದೆಂಬ ತತ್ತ್ವ ಇಲ್ಲಿ ನಮ್ಮ ನೆನಪಿಗೆ ಬಾರದಿರದು. ಸದ್ಗುರುವಿಗೆ ಸದಾಸಚ್ಛಿಷ್ಯನನ್ನು ಪಡೆಯುವ ಚಿಂತೆ, ಸಚ್ಛಿಷ್ಯನಿಗೆ ನಿಯತ ಸದ್ಗುರುವಿನ ಸಂಶೋಧನೆಯ ಚಿಂತೆ ಎಂಬಂತೆ, ಈಕಡೆ ಮಧುರಾನಗರಿಯಲ್ಲಿರುವ ಅಪೂರ್ವ ತೇಜಸ್ವಿ, ಯೋಗನಿಪುಣ ಪೂಜ್ಯಪಾದ ವಿರಜಾನಂದ ಸ್ವಾಮಿಗಳು ಉತ್ತಮ ಶಿಷ್ಯನನ್ನು ಪಡೆಯುವುದಕ್ಕಾಗಿ ನಿಯತ ದೈವದಲ್ಲಿ ಮೊರೆಯಿಡುತ್ತಿದ್ದರೆ, ಆಕಡೆ ಸದ್ಗುರುವಿನ ದರ್ಶನಕ್ಕಾಗಿ ಹಂಬಲಿಸುತ್ತಾ ಆಹಾರ ನಿದ್ರೆಗಳೆನ್ನದೆ, ಕಾಡುನಾಡೆನ್ನದೆ, ಬೆಟ್ಟಗುಡ್ಡಗಳೆನ್ನದೆ ಸುತ್ತಾಡುತ್ತಾ ದಯಾನಂದರು ಬಳಲಿ ಬೆಂಡಾಗಿದ್ದರು. ಈರ್ವರ ನಿಸ್ವಾರ್ಥ ಹೃದಯಗಳ ಕೂಗು ದೈವಕ್ಕೂ ತಲುಪಿರಬೇಕು, ಹೇಗೋ ಆ ದೈವದೊಲುಮೆಯಿಂದ ಕೊನೆಗೆ ಇಬ್ಬರ ಸಮಾಗಮವೂ ಆಯಿತು. ಮೊದಲದರ್ಶನದಿಂದಲೇ ಇವರು ದೀರ್ಘನಿಟ್ಟುಸಿರನ್ನೆಳೆದು ಇಷ್ಟು ದಿನಗಳ ಶ್ರಮದಫಲ ಇಂದು ದೊರೆಯಿತೆಂದು ಹರ್ಷಪುಲಕಿತರಾದರು. ಗುರುಗಳು ಶಿಷ್ಯನ ಮಾನಸಿಕ ಸಾಧನೆ ಹಾಗೂ ಅಧ್ಯಯನದ ಬಗ್ಗೆ ವಿಚಾರ ವಿನಿಮಯಮಾಡಿ, ಇವರ ಇಷ್ಟುದಿನದ ಸಾಧನೆ ನಿರರ್ಥಕವೆಂದು ತಿಳಿಸಿ, ಇವರಲ್ಲಿದ್ದ ಅಭ್ಯಾಸದ ಗ್ರಂಥಗಳನ್ನು ನದಿಗೆಸೆಯಲು ಆಜ್ಞಾಪಿಸಿದರು. ಗುರುಗಳ ಆಜ್ಞೆ ಪಾಲಿಸಿದ ನಂತರವೇ ಪಾಠದ ಆರಂಭವಾಗಿದ್ದು.

ಪೂಜ್ಯ ವಿರಜಾನಂದರಲ್ಲಿ ನಾವು ಮರೆಯಲಾರದ ಮತ್ತೊಂದು ವಿಶೇಷ ಏನೆಂದರೆ ಇವರು ಆಜನ್ಮ ಕುರುಡರಾದರೂ ಇವರ ಸ್ಮರಣ ಶಕ್ತಿ ಅಸಾಧಾರಣ, ಒಂದುಸಾರಿ ಕೇಳಿದರೆ ಸಾಕು ಮತ್ತೆ ಮರೆಯುವ ಪ್ರಶ್ನೆಯೇ ಇಲ್ಲ, ವೇದ, ಉಪನಿಷತ್ತುಗಳನ್ನು ಕೇಳಿಯೇ ಕಂಠಪಾಠ ಮಾಡಿದ್ದರು. ಅಜೇಯಯೌಗಿಕ ಶಕ್ತಿಯನ್ನು ಪಡೆದುಕೊಂಡಿದ್ದರು. ಇಂಥ ಗುರುಗಳಲ್ಲಿ ಆಧ್ಯಾತ್ಮ ವಿದ್ಯೆ ಕಲಿಯಲು ಬಂದ ಶಿಷ್ಯ ದಯಾನಂದನು ಸಾಮಾನ್ಯ ವ್ಯಕ್ತಿಯೇ ? ಅಸಾಮಾನ್ಯ ಗುಣಗಳ ನೆಲೆವಿಡೇ ಆಗಿತ್ತು ಇವನ ಮನಸ್ಸು. ತೀಕ್ಷ್ಣ ಬುದ್ಧಿ ಶಕ್ತಿ, ಅಜೇಯತರ್ಕಶಕ್ತಿ, ಸಾಮಯಿಕ ಸ್ಫೂರ್ತಿ, ಇವೆಲ್ಲಕ್ಕೂ ಮಿಗಿಲಾಗಿ ಇವರಲ್ಲಿದ್ದ ಅಸಾಧಾರಣ ಸೇವಾಭಾವನೆಯಿಂದ ಇವರಿಗೆ ಗುರುಗಳ ಮನ ಒಲಿಸಿಕೊಳ್ಳಲು ತುಂಬಾದಿನ ಬೇಕಾಗಲಿಲ್ಲ. ಕೇವಲ ಅಲ್ಪದಿನಗಳಲ್ಲೇ ನೆಚ್ಚಿನ ಶಿಷ್ಯೋತ್ತಮರೆನಿಸಿಕೊಂಡು ತರ್ಕ, ಯೋಗ, ವೇದ, ವ್ಯಾಕರಣ, ಉಪನಿಷತ್ತು ಎಲ್ಲದರಲ್ಲೂ ಪಾರಂಗತರಾದರು. ಒಮ್ಮೊಮ್ಮೆ ಶಿಷ್ಯನ ಜೊತೆ ತರ್ಕರಂಗಕ್ಕಿಳಿದಾಗ ಗುರುಗಳ ಜಿಹ್ವೆಯೇ ತೊದಲುತ್ತಿತ್ತು, ಆಗ ಅವರಲ್ಲಿ ತಮ್ಮ ವಿದ್ಯೆ ಫಲಿಸುವುದೆಂಬ ನಂಬಿಕೆಯೂ ದೃಢವಾಗುತ್ತಿತ್ತು. ದಯಾನಂದರು ಕೇವಲ ಯೋಗ, ತರ್ಕಗಳಿಂದಲೇ ಗುರುಗಳ ಪ್ರೀತಿಗೆ ಪಾತ್ರರಾಗಿರಲಿಲ್ಲ, ಅವರ ಶಾರೀರಿಕ ಸೌಖ್ಯಕ್ಕೆ ಬೇಕಾದ ಸಮಸ್ತ ಸೇವಾ ಕಾರ್ಯಭಾರ ವಹಿಸಿಕೊಂಡು ನಿರ್ಲಜ್ಜೆಯಿಂದ ನಿಷ್ಠಾವಂತರಾಗಿ ಮಾಡಿ ಅವರ ಹೃದಯವನ್ನೇ ಸೂರೆಗೊಂಡಿದ್ದರು. ಗುರುವಿರಜಾನಂದರಿಗೆ 'ವ್ಯಾಕರಣ ಭಾಸ್ಕರ', 'ವಿದ್ವತ್ಕುಲಮೌಳಿ' ಮೊದಲಾದ ಬಿರುದುಗಳಿದ್ದಂತೆ, 'ಕ್ರೋಧಾನಲ' ಎಂಬ ಬಿರುದೂ ಇತ್ತು. ಸಾಮಾನ್ಯ ಶಿಷ್ಯರಾಗಿದ್ದರೆ ಗುರುಗಳ ಕ್ರೋಧಾಗ್ನಿಯಲ್ಲಿ ಬೆಂದು ಅವರ ಸಹವಾಸವೇ ಬೇಡವೆಂದು ದೂರಸರಿಯುತ್ತಿದ್ದರೋ ಏನೋ, ಆದರೆ ನಮ್ಮ ದಯಾನಂದರು ಗುರುಗಳು ದಂಡದಿಂದ ಶರೀರದಲ್ಲಿ ಬಾಸುಂಡೆ ಬರುವಂತೆ ಹೊಡೆದರೂ ವಿನಯ ವಿಧೇಯತೆ ಬಿಡಲಿಲ್ಲ, ಏಕೆಂದು ಪ್ರಶ್ನಿಸಲಿಲ್ಲ. ಇದೊಂದೇ ನೆಚ್ಚಿನ ಶಿಷ್ಯೋತ್ತಮರಾಗಲು ನಾವು ನಮ್ಮ ಜೀವನದಲ್ಲಿ ಕಲಿಯಬೇಕಾದ ಮಹತ್ತರ ಪಾಠ. ಶಿಷ್ಯನಿಗೆ ವಿದ್ಯೆಯಲ್ಲಿ ಪರಿಪೂರ್ಣತೆ ಬಂದ ಮೇಲೆ ಗುರುಗಳು, ಗುರುದಕ್ಷಿಣೆಯಾಗಿ ಪ್ರಾಣಗಳನ್ನು ಒತ್ತೆಯಿಟ್ಟಾದರೂ ವೈದಿಕ ಧರ್ಮ ಪ್ರಚಾರ ಮಾಡಬೇಕೆಂದು ಕೇಳಿದರು. ಅದಕ್ಕೆ ತಮ್ಮ ಜೀವನವನ್ನೇ ಗುರುಗಳಿಗರ್ಪಿಸಿದ ದಯಾನಂದರು ಇಲ್ಲವೆನ್ನುವರೇ! ಗುರುಗಳಾಜ್ಞೆ ಶಿರಸಾವಹಿಸಿ ಪ್ರಚಾರ ರಂಗಕ್ಕಿಳಿದರು.

ಆರಂಭದಲ್ಲಿ ಸಾಧನೆ, ಬೋಧನೆಗಳೆರಡೂ ಜೊತೆಯಲ್ಲೇ ಸಾಗುತ್ತಿತ್ತು. ಪ್ರಚಂಡ ವಾಗ್ಮಿಗಳೂ, ತಾರ್ಕಿಕರೂ, ನಿಷ್ಠಾವಂತಯೋಗಿಗಳೂ, ಮಹಾ ವಿದ್ವಾಂಸರುಗಳೂ ಪುಂಖಾನುಪುಂಖವಾಗಿ ಬರುತ್ತಾ ಇವರ ಜೊತೆ ಕುಳಿತು ವೇದೋಪನಿಷತ್ತುಗಳ ತತ್ತ್ವಗಳ ಆಧಾರದಮೇಲೆ ತರ್ಕಿಸುತ್ತಾ ಇವರ ವಿದ್ವತ್ತಿಗೆ ಸೋಲನ್ನಪ್ಪಿಸಲು ಬಂದವರೆಲ್ಲಾ ತಾವೇ ಸೋಲನ್ನಪ್ಪಿಕೊಂಡು ಹೋಗುತ್ತಿದ್ದರು. ಇವರನ್ನು ಸೋಲಿಸುವವರು ಒಬ್ಬರಾದರೂ ಭುವಿಯಲ್ಲೇ ಜನಿಸಿಲ್ಲವೇನೋ ಅನ್ನಿಸುವಂತಿತ್ತು. ಕೇವಲ ಹಿಂದೂಗಳೇ ಅಲ್ಲ ಕ್ರೈಸ್ತರೂ, ಮುಸಲ್ಮಾನರೂ ಕೂಡ ಇವರ ಜೊತೆ ಧರ್ಮ ಚರ್ಚೆಗೆ ಬರುತ್ತಿದ್ದರು. ಎಲ್ಲರಿಗೂ ಇವರಲ್ಲಿ ಆಹ್ವಾನ ದೊರಕುತ್ತಿತ್ತು. ಎಲ್ಲರ ಧರ್ಮಗಳಲ್ಲಿರುವ ಲೋಪ ದೋಷಗಳನ್ನು ನಿರ್ಭಯವಾಗಿ ತೋರಿಸಿ ಕೇಳುವವರ ಹೃದಯಗಳಲ್ಲಿ ಸತ್ಯದ ಬೆಳಕನ್ನು ಮೂಡಿಸುತ್ತಿದ್ದರು. ಬಡವ ಬಲ್ಲಿದನೆಂಬ ತಾರತಮ್ಯವಿಲ್ಲದೆ, ಜಾತಿ – ಭೇದವಿಲ್ಲದೆ, ಮತಭೇದವೆಂಬುದಿಲ್ಲದೆ ಸಮಾನತೆಯ ಭಾವದಿಂದ ತರ್ಕಿಸುತ್ತಿದ್ದ ಇವರ ಪ್ರಚಂಡ ವೇದಾಧಾರಸಹಿತ ವಾಕ್‌ಪ್ರವಾಹದಿಂದ ಇವರ ಹೆಸರು ದಿಗ್‌ದಿಗಂತಗಳಲ್ಲೂ ವ್ಯಾಪಿಸಿತು. ಇವರ ಉಗ್ರ ಪ್ರಚಾರದಿಂದ ಅಲ್ಲೋಲಕಲ್ಲೋಲವಾದರೂ ಇವರು ನಿರೀಕ್ಷಿಸಿದ ಫಲ ಸಿಕ್ಕಲಿಲ್ಲ. ಕಾರಣ ವ್ಯಕ್ತಿಗತ ಪ್ರಯತ್ನದಿಂದ ಇವರು ಊಹಿಸಿದ ಮಟ್ಟಕ್ಕೆ ವೈದಿಕ ಧರ್ಮದ ಪ್ರಚಾರ ಏರಲು ಸಾಧ್ಯವಾಗಲಿಲ್ಲ. ಸಾಮೂಹಿಕ ಪ್ರಯತ್ನದಿಂದ ತಾವು ಬಯಸಿದ ಫಲ ಸಿಗಬಹುದೆಂದು ಯೋಚಿಸಿ 1875 ನೇ ಏಪ್ರಿಲ್ 10 ರಲ್ಲಿ ಬೊಂಬಾಯಿಯಲ್ಲಿ "ಆರ್ಯಸಮಾಜ" ಸ್ಥಾಪಿಸಿದರು. ಈ ಸಂಸ್ಥೆಯ ನೀತಿ-ನಿಯಮಗಳು ಪ್ರತಿವ್ಯಕ್ತಿಯೂ ಅವಶ್ಯವಾಗಿ ಜೀವನದಲ್ಲಿ ಅಳವಡಿಸಿಕೊಳ್ಳುವಂತಹುದಿತ್ತು. ಸೂಕ್ಷ್ಮವಾಗಿ ಅವುಗಳನ್ನು ಹೇಳುವುದಾದರೆ "ವಿಗ್ರಹಾರಾಧನೆ, ಶ್ರಾದ್ಧ, ಜಾತಿಪದ್ಧತಿ, ಮಾಂಸಾಹಾರ, ಬಾಲ ವಿವಾಹ, ವೃದ್ಧ ವಿವಾಹ, ಪರದೆ ಇವುಗಳ ಖಂಡನೆ ಮತ್ತು ವರ್ಣವ್ಯವಸ್ಥೆ, ನಿರಾಕಾರೋಪಾಸನೆ, ಜೀವಿತ ಪಿತೃಗಳ ಶುಶ್ರೂಷೆ ಸಾತ್ವಿಕಾಹಾರ, ಪ್ರೌಢವಿವಾಹ, ನಾರೀಸಮಾನತ್ತ್ವ ಮುಂತಾದುವುಗಳ ಸಮರ್ಥನೆ". ಸಂಘದ ಸದಸ್ಯರು ಪ್ರಾಣಾರ್ಪಣೆಗೂ ಸಿದ್ಧರಾಗಿ ಸಮಾಜೋದ್ಧಾರಕ್ಕೆ ಸಿದ್ಧರಿದ್ದುದರಿಂದ ಅತ್ಯಲ್ಪಕಾಲದಲ್ಲೇ ಸಂಘವು ಅತ್ಯುನ್ನತಿಯನ್ನು ಸಾಧಿಸಿತು. ಆಗ್ರಾ, ಮೀರತ್, ಜಯಪುರ ಮೊದಲಾದ

ಇನ್ನೂ ದೇಶದ ಅನೇಕ ಕಡೆಗಳಲ್ಲಿ ಆರ್ಯ ಸಮಾಜ ಸ್ಥಾಪನೆಯಾಯಿತು.

ದಯಾನಂದರು ಕೇವಲ ಮತ ಪ್ರಚಾರಕರೇ ಅಲ್ಲ ಯೋಗಿಗಳೂ ಹೌದು. ಆದ್ದರಿಂದ ತಮ್ಮ ಮೃತ್ಯು ಆಗಮಿಸುತ್ತಿರುವುದನ್ನು ತಿಳಿದುಕೊಂಡಿದ್ದರು. ಸಂಘದ ಸದಸ್ಯರಿಗೆ ಉಯಿಲು ಬರೆದುಕೊಟ್ಟರು. ಇವರು ಉಯಿಲು ಬರೆದು ಕೊಟ್ಟಾಗ ಇವರಲ್ಲಿ ಮೃತ್ಯು ಸನ್ನಾಹದ ಒಂದು ಸುಳಿವೂ ಕಂಡು ಬರುತ್ತಿರಲಿಲ್ಲ. ಆದ್ದರಿಂದ ಅವರ ಗೆಳೆಯರು ಇಷ್ಟು ಬೇಗ ಉಯಿಲು ಏಕೆ ಅಂದರಂತೆ. ಆಗ ನಮ್ಮ ಮನಸ್ಸಿಗೆ "ಯೌಗಿಕ ಮನಸ್ಸು ತಿಳಿಯುವುದನ್ನು ಸಾಮಾನ್ಯರ ಮನಸ್ಸು ತಿಳಿಯಲು ಸಾಧ್ಯವಾಗುವುದೇ" ಎಂದು ಅನ್ನಿಸದಿರದು.

ಇವರ ದುರಂತ ಸಾವನ್ನು ವೀಕ್ಷಿಸಿದರೆ ದುಃಖದ ಕೋಡಿ ಹರಿಯುವುದರಲ್ಲಿ ಸಂದೇಹವೇನಿಲ್ಲ. 'ಖಂಡಿತವಾದಿ – ಲೋಕವಿರೋಧಿ' ಅನ್ನುವ ಹಾಗೆ ಸದಾ ಅಸತ್ಯವನ್ನು ನಿರ್ಭಯವಾಗಿ ಖಂಡಿಸುವ ಇವರ ಮನೋಭಾವವೇ ಇವರ ಸಾವಿಗೆ ಕಾರಣವಾಯಿತೆನ್ನಬಹುದು. ಜೋದ್‌ಪುರದಲ್ಲಿ ಹರಿದ ಇವರ ವಾಕ್‌ಝರಿಯಿಂದ ಕ್ರೋಧೋದ್ರಿಕ್ತರಾದ ಹಲವರು ಇವರಿಗೆ ವಿಷಮಿಶ್ರಿತ ಹಾಲುಣಿಸಿ ಇವರ ಬಲಿಷ್ಠಕಾಯವನ್ನು ಭಯಾನಕರೋಗಗಳ ನೆಲೆವೀಡಾಗಿಸಿದರು. ಇದೇ ಇವರ ಮೃತ್ಯುವಿಗೆ ನಾಂದಿಯಾಯಿತು.

ಇವರು ಮೃತ್ಯುವಿನ ದವಡೆಯಲ್ಲಿದ್ದರೂ ವಿಷ ಉಣಿಸಿದವನನ್ನು ಕ್ಷಮಿಸಿ ಹಣವಿತ್ತು ದೂರಕಳುಹಿಸಿದ ಸನ್ನಿವೇಶ ನೋಡಿದಾಗ ಇವರ ಮಹಾನ್ ದಯಾಶೀಲ ಗುಣ ವರ್ಣಿಸಲಸದಳವೆನಿಸುವುದು.

ಇವರ ಯೌಗಿಕ ಬ್ರಹ್ಮಚರ್ಯ ಕಾಯದ ಬಲ ಇವರ ಅಂತ್ಯಯಾತ್ರೆಯ ಸಮಯದಲ್ಲಿ ನೋಡುತ್ತೇವೆ. ವಿಷಸೇವಿಸಿದ ಒಂದು ತಿಂಗಳು ಅಂದರೆ 30 ದಿನಗಳು ಇವರು ಜೀವಿಸಿದ್ದರೆನ್ನುವುದನ್ನು ನಾವು ನಮ್ಮ ಜೀವಿತದಲ್ಲೇ ಮರೆಯಲಾಗದ ವಿಷಯ. 1882 ನೇ ಅಕ್ಟೋಬರ್ 30 ಕ್ಕೆ ಇವರ ಇಹಲೋಕ ಯಾತ್ರೆ ಪೂರೈಸಿತು. ಕೇವಲ ಐವತ್ತಾರು ವರ್ಷಗಳಲ್ಲಿ ಸುಮಾರು 56 ಕೋಟಿ ಜನರ ಮನಸ್ಸನ್ನೇ ಸೂರೆಗೊಂಡ ಇವರ ಜ್ಞಾನದ ಪ್ರಖರಶಕ್ತಿ ಊಹಿಸಲಸಾಧ್ಯ. ಆದರೆ "ಒಂದು ಮಹಾನ್ ಆತ್ಮದಕಥೆ ಜನನದಿಂದ ಆರಂಭವೇನೋ ಆಗಬಹುದು, ಮರಣದೊಂದಿಗೆ ಪರ್ಯವಸಾನ ಮಾತ್ರ ಆಗುವುದಿಲ್ಲ" – ದೇಹತ್ಯಾಗದ ಮೊದಲೆಂತೋ ದೇಹತ್ಯಾಗಾನಂತರವೂ ಅಂತೆಯೇ ಸ್ಫೂರ್ತಿ ನೀಡುತ್ತಿರುವುದೇ ಮಹಾನ್ ಆತ್ಮನ ಲಕ್ಷಣ. ★

---

(12 ನೇ ಪುಟದಿಂದ)

ನಿನ್ನ ವಿರಹವನ್ನು ತಾಳಲಾರದೆ ನೆಲದ ಮೇಲೆ ಬೀಳುತ್ತಾಳೆ. ಹಾಗೇ ಮಲಗಿ ನಿದ್ರಿಸುತ್ತಾಳೆ. ಒಮ್ಮೊಮ್ಮೆ ಮೂರ್ಛೆಯನ್ನೂ ಹೊಂದುತ್ತಾಳೆ. ಅವಳ ಪ್ರಾಣ ಕಂಠದ ತನಕ ಬರುತ್ತದೆ. ಈ ವಿರಹಾವಸ್ಥೆಯನ್ನು ಅರಿಯದ ಮೂಢರಾದ ಅವಳ ಆಪ್ತಜನರಲ್ಲಿ ಕೆಲವರು ಅವಳ ದುಃಖವನ್ನು ದೂರ ಮಾಡಲು ವೇದ ಪಠಿಸುತ್ತಾರೆ. ಮತ್ತೆ ಕೆಲವರು ಜ್ಯೋತಿಷಿಗಳ ಮೂಲಕ ನವಗ್ರಹಗಳ ಪೂಜೆಯನ್ನು ಮಾಡಿಸುತ್ತಾರೆ. ಇನ್ನು ಕೆಲವರು ಕೈಯನ್ನು ಹಿಡಿದು ನಾಡಿಯನ್ನು ನೋಡುತ್ತಾರೆ. ಆದರೆ ರಾಧೆಯು ನಿನ್ನ ವಿರಹದ ಕಾರಣವೇ ಇಂತಹ ಸ್ಥಿತಿಯನ್ನು ಹೊಂದಿದ್ದಾಳೆ".

ರಾಧೆಯ ದೌರ್ಭಾಗ್ಯವೆಂದರೆ ಅವಳ ಸ್ವಪ್ನದಲ್ಲೂ ಕೃಷ್ಣ ಬರಲಿಲ್ಲ. "ಸಪುನಹಿ ನಹಿ ಹು ಆಯಿಲರೆ ಗೋಕುಲ ಗಿರಿಧಾರಿ". ರಾಧಾ ಕೊನೆಗೆ ವಿಷಮಾವಸ್ಥೆಯನ್ನು ಮುಟ್ಟುತ್ತಾಳೆ. ಕೃಷ್ಣನನ್ನು ಸ್ಮರಿಸುತ್ತಾ ಸ್ಮರಿಸುತ್ತಾ ರಾಧೆ ತನ್ನನ್ನೇ ಕೃಷ್ಣನೆಂದುಕೊಂಡು 'ರಾಧಾ–ರಾಧಾ' ಎಂದು ಕರೆಯುತ್ತಾಳೆ. ನಂತರ ಬುದ್ಧಿ ಎಚ್ಚರಿಸಿದಾಗ 'ಕೃಷ್ಣ' ಎಂದು ಧ್ಯಾನದಲ್ಲಿ ತೊಡಗುತ್ತಾಳೆ.

ರಾಧೆಯ ಅಂತಿಮ ಕೋರಿಕೆ ಇದು 'ಮರಣ ಕಾಲಿ ಕೃಷ್ಣನಾಮ ಲಿಖೋ ಮಜು ಅಂಗ' ಸಾಯುವ ಕಾಲದಲ್ಲಿ 'ಹೇಸಖಿ ನನ್ನ ಕಿವಿಗಳಲ್ಲಿ ಕೃಷ್ಣನ ನಾಮವನ್ನು ಎಚ್ಚರಿಸಬೇಕು. "ರಾಧಾ ತೇ ಪಿರ್ ಪುನಿ ಪುನಿ ಮಾಧವ, ಮಾಧವ ತೇ ಪುನಿ ರಾಧಾ" ಎಂಬಲ್ಲಿ ವಿದ್ಯಾಪತಿಯು ರಾಧಾ ಕೃಷ್ಣರ ಐಕ್ಯವನ್ನು ನಿರೂಪಿಸಿರುವುದು ಮೋಹಕವಾಗಿದೆ. ರಾಧೆಯ ಕಣ್ಣೀರಿನ ಧಾರೆ ಹರಿದೂ ಹರಿದು ಕೊನೆಗೆ ಕಣ್ಣೀರೇ ಬತ್ತಿ 'ಕೃಷ್ಣ, ಕೃಷ್ಣ' ಎಂದು ಜಪಿಸುತ್ತಾ ನಿರಾಶಳಾಗುವ ರಾಧೆಯ ಮನಮಿಡಿಯುವ ಚಿತ್ರಣವನ್ನು ಕವಿ ನೀಡಿದ್ದಾನೆ. ಕೃಷ್ಣ–ಸಖಿಯರ ಪಾತ್ರಗಳೂ ಸೊಗಸಾಗಿ ಚಿತ್ರಿತವಾಗಿವೆ.

ಹದಿನಾಲ್ಕನೇ ಶತಮಾನದಲ್ಲಿ ಆಗಿಹೋದ ಕೃಷ್ಣೋಪಾಸಕ ಕವಿಗಳಲ್ಲಿ ಮಹಾತ್ಮ 'ನರಸೀ ಮೆಹ್ತಾ' ಹೆಸರು ಎದ್ದು ತೋರುವಂತಹುದಾಗಿದೆ. ಗುಜರಾತೀ ಭಾಷೆಯಲ್ಲಿ ಕೃಷ್ಣನನ್ನು ಕುರಿತಂತೆ ಪದ್ಯಗಳನ್ನು ರಚಿಸಿರುವ ನರಸೀಮೆಹ್ತಾ ಕೃಷ್ಣನ ಪ್ರಾರ್ಥನೆ ಮಾಡಿರುವುದಂತೂ ಹೃದಯಂಗಮವಾದುದಾಗಿದೆ.

ನರಸೀಮೆಹ್ತಾನ ಸಾಂಸಾರಿಕ ಜೀವನ ಕಷ್ಟಮಯವಾದ ಸನ್ನಿವೇಶಗಳಿಂದ ಕೂಡಿತ್ತಂತೆ! ನರಸೀಮೆಹ್ತಾ ಪತ್ನಿಪುತ್ರರನ್ನು ಕಳೆದುಕೊಂಡಾಗಲಂತೂ, ಈ ಭವಬಂಧನದ ಪಾಶವೇ ಕತ್ತರಿಸಿ ಹೋಗಿ ಆತ ವೈರಾಗ್ಯದಲ್ಲಿ ಮುಳುಗುವಂತಾಯಿತು. ನರಸೀಮೆಹ್ತಾನ ವೈರಾಗ್ಯಪೂರ್ಣವಾದ ಪದಗಳೂ ಮಹತ್ವಪೂರ್ಣವಾಗಿವೆ. ಅಲ್ಲದೆ ರಸವತ್ತಾಗಿವೆ, ಪತ್ನಿಯ ಬಗೆಗೆ ಹೆಚ್ಚು ಚಿಂತಿಸದ ನರಸೀಮೆಹ್ತಾ ಯಾವಾಗಲೂ ಭಗವಂತನಾದ ಶ್ರೀಕೃಷ್ಣನ ನಾಮಸ್ಮರಣೆಯಲ್ಲಿಯೇ ಕಾಲ ಕಳೆಯುತ್ತಿದ್ದನೆಂದೂ ಒಂದು ಕಥೆ ತಿಳಿಸುತ್ತದೆ. ಭಾವನಿರ್ಭರನಾಗಿ ಕೃಷ್ಣನನ್ನು ಕೊಂಡಾಡಿರುವ ನರಸೀಮೆಹ್ತಾನ ಈ ಪದ್ಯವಂತೂ ಅವನ ಮಾನಸಿಕ ಆಂದೋಲನವನ್ನು ತೋರಿಸುವಂತಹುದಾಗಿದೆ.

"ಕೃಷ್ಣ ಜೀ ಮಾತಾ, ಕೃಷ್ಣ ಜೀ ಪಿತಾ,
ಕೃಷ್ಣ ಸಹೋದರ ಭಾಯಿ ॥
ಅಂತಕಾಲೆ ಜಾವೂ ಎಕಲಡಾ ಸಾಥೇ
ಶ್ರೀಕೃಷ್ಣ ಜೀ ಸಗಾಯಿ ।
ಕೃಷ್ಣ ಜೀ ಕೃಷ್ಣ ಜೀ ಕಹೆತಾ ಕೃಷ್ಣ
ಸರೀಕಾ ಥಾಶೋ ।
ಭಣೆ ರೆ ನರಸಿಯೋ ಸಹೆಜಿ ತಮ ವೈಕುಂಠ
ಜಾಶೋ ॥"

ತಂದೆ, ತಾಯಿ, ಬಂಧು, ಬಳಗ, ಸಹೋದರ ಎಲ್ಲವೂ ಶ್ರೀಕೃಷ್ಣನೇ. ಅಂತ್ಯಕಾಲದಲ್ಲಿ ಶ್ರೀಕೃಷ್ಣನ ನಾಮವೊಂದೇ ಮನುಷ್ಯರನ್ನು ಇಹಲೋಕದಿಂದ ಉದ್ಧರಿಸುವಂತಹುದಾಗಿದೆ. ಕೃಷ್ಣನ ನಾಮ ಮಾತ್ರದಿಂದಲೇ ವೈಕುಂಠಲೋಕ ಪ್ರಾಪ್ತಿಯಾಗುತ್ತದೆ. ಅಂತಹ ಕೃಷ್ಣನ ಧ್ಯಾನವನ್ನು ಮಾಡದ ಮೂಢಜನರಿಗೆ ತಿಳುವಳಿಕೆಯುಂಟಾಗುವಂತೆ ಮಾಡುವುದು ಹೇಗೆ? ಧ್ರುವ, ಪ್ರಹ್ಲಾದ ಮುಂತಾದ ಭಕ್ತರನ್ನೆಲ್ಲಾ ಕೈಬಿಡದೆ ಕಾಪಾಡಿದ ಕೃಷ್ಣಪರಮಾತ್ಮನು ಆತನ ನಾಮಸ್ಮರಣೆಯನ್ನು ಭಕ್ತಿಯಿಂದ ಮಾಡುವವರನ್ನು ಉದ್ಧರಿಸುವನಂತೆ!

ಪರಧನ–ಪರಸ್ತ್ರೀಯರಿಗಾಸೆಪಡದ, ಸುಳ್ಳು–ಮೋಸ–ಹಿಂಸೆಗಳನ್ನು ಮಾಡದ, ನ್ಯಾಯಮಾರ್ಗದಲ್ಲಿ ನಡೆಯುವ, ಪರಮಾತ್ಮನಲ್ಲಿ ಭಕ್ತಿಯುಳ್ಳ ಮಾನವರು–ನಿಜಕ್ಕೂ ಸುಖಿಗಳಾಗುತ್ತಾರೆ.

"ವೈಷ್ಣವ ಜನತೋ ತೇ ನಕಹಿಯೆ ಜೇ ಪೀಡ
ಪರಾಯಿ ಜಾಣೆರೇ
ಪರದುಃಖೆ ಉಪಕಾರ ಕರೆ ತೋಯೆ ಮನ
ಅಭಿಮಾನ ನ ಆಣೆರೇ ।

ಎಂಬ ಪದ್ಯವೊಂದರ ಪಂಕ್ತಿಯಂತೂ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದೆ. ನರಸೀಮೆಹ್ತಾನ ಪದ

ಗಳಲ್ಲಿನ ಆರ್ದ್ರ ಭಾವನೆಗಳ ಚಿತ್ರಣ ಮೀರಾ ಬಾಯಿಯ ಪದ್ಯಗಳಲ್ಲಿಯೂ ಗುರುತಿಸಬಹುದಾಗಿದೆ.

ಬಂಗಾಳದಲ್ಲಿ ಕೃಷ್ಣಭಕ್ತಿಯನ್ನು ಪ್ರಚಾರ ಮಾಡಿದವರಲ್ಲಿ ಪ್ರಮುಖರಾದವರು ಚೈತನ್ಯರು· ಕವಿ ವಿದ್ಯಾಪತಿಯು ರಚಿಸಿದ್ದ ರಾಧಾಕೃಷ್ಣರ ಲೀಲೆಗಳನ್ನು ಕುರಿತ ಪದ್ಯಗಳನ್ನು ಓದಿ, ಅದರ ಭಾವಾವೇಶದಿಂದ ಚೈತನ್ಯರು ಮೂರ್ಛಿತರಾಗುತ್ತಿದ್ದರಂತೆ! ಚೈತನ್ಯರು ಪ್ರಾರಂಭದಿಂದಲೇ ಕೃಷ್ಣನಲ್ಲಿ ಆಸಕ್ತರಾಗಿ ಕೀರ್ತನೆಗಳನ್ನು ರಚಿಸಿದವರಲ್ಲ. ಏಕೆಂದರೆ ಸಂಸಾರದ ಜವಾಬ್ದಾರಿ ಅವರ ಮೇಲಿದ್ದಿತು. ತಂದೆ ತಾಯಿ, ಪತ್ನಿಯರನ್ನು ಚೈತನ್ಯರು ಬಹುವಾಗಿ ಪ್ರೀತಿಸುತ್ತಿದ್ದರಂತೆ. ಸಾಮಾನ್ಯ ಮಾನವನ ಜೀವಿತದಂತೆಯೇ ಚೈತನ್ಯರ ಬಹು ಪಾಲು ಜೀವನವೂ ಕಳೆದುಹೋಯಿತು. ಚೈತನ್ಯರ ಸಹೋದರರೆಲ್ಲರೂ ಮೊದಲೇ ಮೃತರಾದುದರಿಂದ ತಂದೆ ಜಗನ್ನಾಥ, ಮತ್ತು ತಾಯಿ ಸಚೀಜಿಯರನ್ನು ರಕ್ಷಿಸುವ, ಪೋಷಿಸುವ ಜವಾಬ್ದಾರಿ ಚೈತನ್ಯರಿಗೇ ಬಂದಿತು

ಚೈತನ್ಯರು ಸಂಸ್ಕೃತಭಾಷೆಯಲ್ಲಿ ಅದ್ವಿತೀಯವಾದ ಪರಿಣತಿಯನ್ನು ಪಡೆದವರಾಗಿದ್ದರು. ಅವರ ಭಾಷಾಜ್ಞಾನ ಮಿಕ್ಕ ಪಂಡಿತರನ್ನು ನಾಚಿಸುವುದಂತೆ. ಪ್ರಿಯ ಪತ್ನಿ ಮೃತಳಾದಾಗ, ನೊಂದ ಚೈತನ್ಯರು ಕಾಲ ಸರಿದಂತೆ ಶ್ರೀ ಈಶ್ವರಪೂರಿ ಎಂಬುವರ ಸಂಪರ್ಕದಲ್ಲಿ ಬಂದರು. ಭಕ್ತಿ, ವೈರಾಗ್ಯ, ಜ್ಞಾನ, ಎಂದರೆ ಏನೆಂಬುದನ್ನು ಆ ಮಹಾಚೇತನವು ತಿಳಿದುಕೊಳ್ಳುವ ಕಾಲ ಹೀಗೆ ತಾನಾಗಿಯೇ ಬಂದಿತು. ಅಂದಿನಿಂದ ಚೈತನ್ಯರ ಜೀವನದ ದಿಕ್ಕೇ ಬದಲಾಯಿಸಿತು. ಭಕ್ತಿಯಿಂದ ಓತಪ್ರೋತರಾದ ಚೈತನ್ಯರು ಕೃಷ್ಣನಲ್ಲೇ ತಮ್ಮ ಸಮಸ್ತವನ್ನೂ ಕಂಡರು. ಕೃಷ್ಣನೇ ಈಗ ಅವರ ಸಾರ ಸರ್ವಸ್ವವಾಗಿದ್ದ.

ಶಿಷ್ಯರನ್ನು ಅತಿಯಾಗಿ ಪ್ರೀತಿಸುತ್ತಿದ್ದ ಚೈತನ್ಯರು ಸಹ ಅವರ ಏಳಿಗೆಗಾಗಿ ಕೃಷ್ಣನನ್ನು ಕುರಿತಂತೆ ಅನೇಕ ವಿಷಯಗಳನ್ನು ಅವರಿಗೆ ಬೋಧಿಸುತ್ತಿದ್ದರು. ಚೈತನ್ಯರ ಶಿಷ್ಯರಲ್ಲಿ ಅದ್ವೈತದಾಸ, ಹರಿದಾಸ, ನಿತ್ಯಾನಂದ, ಮುಂತಾದವರು ಹೆಸರಿಸ ತಕ್ಕವರಾಗಿದ್ದಾರೆ.

ಚೈತನ್ಯರು ಜೀವಿಸಿದ್ದು ಅಲ್ಪಕಾಲ. ಆದರೆ ಈ ಮಹಾಭಕ್ತನ ಸಾಧನೆ ಅಪೂರ್ವವಾದುದು. ಚೈತನ್ಯರ ಕೀರ್ತನೆಗಳಾದರೋ ಮಾಧುರ್ಯ ಭಾವದಿಂದ ಕೂಡಿದ್ದು ಸಹೃದಯರ ಮನಸ್ಸನ್ನೇ ಅಪಹರಿಸುವಂತಹುದಾಗಿವೆ. ಸಂಸ್ಕೃತ ಭಾಷೆಯಲ್ಲಿರುವ ಈ ಕೀರ್ತನೆಗಳಲ್ಲಿ ಗ್ರಾಹ್ಯವಾದ ವಿಷಯಗಳು ಅಡಕಗೊಂಡಿವೆ.

ನ ಧನಂ ನ ಜನಂ ನ ಸುಂದರೀ
ಕವಿತಾಂ ವಾ ಜಗದೀಶ ಕಾಮಯೇ ।
ಮಮ ಜನ್ಮನಿ ಜನ್ಮನೀಶ್ವರೇ
ಭವತಾದ್ ಭಕ್ತಿರಹೈತುಕೀ ತ್ವಯಿ.
ಅಯಿ ನಂದ ತನುಜ ಕಿಂಕರಂ ಪತಿತಂ
ಯಾಂ ವಿಷಯೇ ಭವಾಂಬುಧೋ ।
ಕೃಪಯಾ ತವ ಪಾದ ಪಂಕಜ
ಸ್ಥಿತಿ ಧೂಲೀಸದೃಶಂ ವಿಚಿಂತಯ ॥ ”

–ಧನ, ಸುಂದರಿಗಳ ಬಂಧನ ನನಗೆ ಬೇಡ ನಾನು ಕವಿಯಾಗಲೂ ಬಯಸುವುದಿಲ್ಲ. ಓ ನಂದ ಕುಮಾರನಾದ ಶ್ರೀ ಕೃಷ್ಣ! ನಿನ್ನ ಪಾದ ಕಮಲದ ಧೂಳಾಗಿದ್ದರೆ ನಾನು ಧನ್ಯ-ಎಂದು ಒಂದೆಡೆ ಹೇಳಿಕೊಂಡಿರುವ ಚೈತನ್ಯರು ಕೃಷ್ಣನ ಸ್ಮರಣೆ ಮಾತ್ರದಿಂದ ಹರ್ಷಸಾಗರದಲ್ಲಿ ಮುಳುಗಿ ಹೋಗುತ್ತಿದ್ದರಂತೆ. ಕೃಷ್ಣನ ಧ್ಯಾನವೇ ಎಲ್ಲರ ಶ್ರೇಯಸ್ಸಿಗೂ ಮೂಲಭೂತವಾದ ಅಂಶವಾಗಿದೆ.

ದಕ್ಷಿಣಭಾರತದ ಗೋದಾದೇವಿಯಂತೆ ಕೃಷ್ಣನನ್ನು ತನುಮನಗಳಿಂದ ಆರಾಧಿಸಿದ ಮಹಾಭಕ್ತೆಯೇ ಮೀರಾಬಾಯಿ "ಗಿರಿಧರ ಗೋಪಾಲ" ಅಂಕಿತದಿಂದ ಕೃಷ್ಣನನ್ನು ಕುರಿತಂತೆ ನಾನಾ ಭಜನೆಗಳನ್ನು ರಚಿಸಿರುವ ಮೀರಾ ಶ್ರೇಷ್ಠ ಸಾಧಕಿಯಷ್ಟೇ ಅಲ್ಲ ಭಕ್ತೆಯೂ, ಗಾಯಕಿಯೂ ಹೌದು! ಭಾರತದ ಧಾರ್ಮಿಕ ಚರಿತ್ರೆಯಲ್ಲಿ ಮೀರಾಬಾಯಿಯು ಶಾಶ್ವತವಾದ ಸ್ಥಾನವನ್ನು ಪಡೆದುಕೊಂಡಿದ್ದಾಳೆ.

ಗಾಯಾಳುವಿನ ಸ್ಥಿತಿ ಗಾಯಗೊಂಡವನಿಗೇ ಗೊತ್ತಾಗುತ್ತದೆ. 'ಗಾಯಲ್ ಕಿ ಗತಿ ಗಾಯಲ್ ಜಾನೆ, ಔರ ನ ಜಾನೇ ಕೋಯಿ' ಎಂದ ಮೀರಾ ಕೃಷ್ಣನ ನೆನಪಿನಿಂದ ಘಾಸಿಗೊಂಡಿದ್ದಾಳೆ. 'ಮೇರೆತೋ ಗಿರಿಧರ ಗೋಪಾಲ ದೂಸರೋ ನ ಕೋಯಿ' ಮೀರಾಳಿಗೆ ಕೃಷ್ಣ ಪ್ರಿಯತಮನೇ ವಿನಃ ಬೇರೆ ಯಾರು ಅಲ್ಲ. ಆ ಪ್ರಿಯತಮನ ಸಾಕ್ಷಾತ್ಕಾರಕ್ಕಾಗಿ ಮೀರಾ ಹುಚ್ಚಿಯಂತೆ ಗೆಜ್ಜೆಗಳನ್ನು ಕಾಲಿಗೆ ಕಟ್ಟಿಕೊಂಡು ನರ್ತಿಸಿದ್ದೂ ಉಂಟು. 'ಪಗ ಗುಂಗುರು ಬಾಂಧ ಮೀರಾ ನಾಚೀರೇ' ಕೃಷ್ಣನ ದರ್ಶನವಿಲ್ಲದೇ ಮೀರಾ ಅತ್ಯಂತ ದುಃಖಿತಳಾದಳು. 'ದರಸ ಬಿನಾ ದೂಖದ್ ಲಾಗೆ ನೈನನ್' ಕೃಷ್ಣನ ವಿರಹದಿಂದ ಬಳಲಿದ ಮೀರಾ ಕರುಣಾರ್ದ್ರ ಹೃದಯದಿಂದ ಕೃಷ್ಣನನ್ನು ಪ್ರಾರ್ಥಿಸುತ್ತಾಳೆ. ನೀರಿನಿಂದ ತೆಗೆದ ಮೀನಿನಂತೆ, ಮೀರಾಳ ಸ್ಥಿತಿಯಾಗಿದೆ. ಕೃಷ್ಣನೇನೋ ಸುಖವಾಗಿರಬಹುದು. ಸಾಧುವಿಗೆ ರಾಮನ ಧ್ಯಾನ ಪ್ರಿಯವಾದಂತೆ, ಚಕೋರ ಪಕ್ಷಿ ಚಂದ್ರನ ಧ್ಯಾನದಲ್ಲಿರುವಂತೆ, ಮೀರಾ ಸದಾಕಾಲವೂ ಕೃಷ್ಣನ ಧ್ಯಾನದಲ್ಲೇ ಇದ್ದಾಳೆ – 'ಜಲ್ದಿ ಖಬರ್‌ಲೇನಾ ವೆ.ಹರಂ ಮೇರಿ, ಜಲಬಿನ ಮೀನ ಮರೆ ಏಕ ಛಿನ ಮೇ'. ಸಂತ ಮಿರಾಬಾಯಿಯ ಅನೇಕ ಪದ್ಯಗಳನ್ನು ಉತ್ತರಭಾರತದ ಎಲ್ಲೆಡೆ ಇಂದೂ ಹಾಡುತ್ತಾರೆ. –(ಸಶೇಷ)

## ಯುವವಾಣಿ

# ಇರಾನಿನಲ್ಲಿ ರಾಮಾಯಣ

ನಮ್ಮ ದೇಶದ ಸಂಸ್ಕೃತಿ ಬಹಳ ಹಿಂದೆ ಹೊರಹಾದು ಅನೇಕ ನೆರೆರಾಷ್ಟ್ರಗಳಲ್ಲಿ ಬೇರೂರಿದೆ. ಈ ಪ್ರಾಂತ್ಯಗಳಲ್ಲಿ ಟಿಬೇಟಿನ ಆಚೆ ಇರುವ ಪೂರ್ವ ಇರಾನಿನ ಗೌಸ್ತನ ಅಥವಾ ಖೋರ್ಟಾ ಪ್ರದೇಶವೂ ಒಂದು,

ಭಾರತೀಯ ಸಂಸ್ಕೃತಿಗೆ ಸಂಬಂಧಪಟ್ಟ ಅನೇಕ ಗ್ರಂಥಾವಶೇಷಗಳನ್ನು ಪೆಲ್ಲಿಯೋ ಮುಂತಾದ ವಿದ್ವಾಂಸರಗಳು ಇಲ್ಲಿಂದ ಹೊರತೆಗೆದಿದ್ದಾರೆ. ಈ ಅವಶೇಷಗಳನ್ನು ಈಗಲೂ ಪ್ಯಾರಿಸ್ಸಿನ 'ಬಿಬ್ಲಿಯೋಥಿಕ್ ನ್ಯಾಷನಲ್' ಗ್ರಂಥಾಲಯದಲ್ಲಿ ಕಾಣಬಹುದು. ಈ ಗ್ರಂಥಗಳಲ್ಲಿ ರಾಮಾಯಣದ ಕಥನವನ್ನು ಹೇಳುವ ಮೂರು ಪತ್ರ ಸುರಳಿಗಳೂ ಇವೆ.

ಈ ಗ್ರಂಥವು 'ಖೋಟಾನೀಸ್' ಎಂಬ ಭಾಷೆಯಲ್ಲಿದ್ದು ತುನ್‌ಹು ಅಂಗ್ ಎಂಬಲ್ಲಿ ದೊರೆತಿರುವ ಇದನ್ನು ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಬೆಯಲಿ ಎಂಬ ಪಂಡಿತರು ಪರಿಶೋಧಿಸಿ ಪ್ರಕಟಿಸಲು ಯತ್ನಿಸಿದ್ದಾರೆ.

ಈ ರಾಮಾಯಣದ ಕಾಲವು ನಿರ್ದಿಷ್ಟವಾಗಿಲ್ಲದಿದ್ದರೂ ಸುಮಾರು ಒಂದು ಸಾವಿರ ವರ್ಷಗಳ ಹಿಂದಿನದೆಂದು ಹೇಳಲು ಆಧಾರಗಳಿವೆ. ನಮ್ಮ ವಾಲ್ಮೀಕಿ ರಾಮಾಯಣವನ್ನು ಸ್ವಲ್ಪ ಮಟ್ಟಿಗೆ ಹೋಲುವ ಈ ಕಥೆಯಲ್ಲಿ ಹಲವಾರು ಅಸಾಧಾರಣವಾದ ಅಂಶಗಳುಂಟು.

ಈ ಕಥೆಯಂತೆ, ಒಬ್ಬ ಬ್ರಾಹ್ಮಣನು ಬೆಟ್ಟವೊಂದರಲ್ಲಿ ತಪಸ್ಸು ಮಾಡುತ್ತಿರಲು ಹನ್ನೆರಡು ವರುಷಗಳ ನಂತರ ಈಶ್ವರನು ಕಾಣಿಸಿಕೊಂಡು ಅವನ ತಪಸ್ಸಿಗೆ ಮೆಚ್ಚಿ ಕಾಮಧೇನುವನ್ನು ಮತ್ತು ಚಿಂತಾಮಣಿಯನ್ನು ಕೊಟ್ಟನು. ನಂತರ ಆ ಬ್ರಾಹ್ಮಣನು ವಿವಾಹವಾಗಿ ತೃಪ್ತಿಯಿಂದ ಜೀವಿಸುತ್ತಿದ್ದನು. ಇದೇ ಕಾಲದಲ್ಲಿ ದಶರಥನೆಂಬ ರಾಜನು ಆ ಪ್ರಾಂತ್ಯವನ್ನು ಆಳುತ್ತಿದ್ದನು. ಒಂದು ಸಲ ಈ ರಾಜನು ಬೇಟೆಯಾಡಲು ಹೊರಟು ತನ್ನ ಪರಿವಾರದಿಂದ ದೂರವಾಗಿ ಈ ಬ್ರಾಹ್ಮಣನ ಮನೆಗೆ ಬಂದನು. ಬ್ರಾಹ್ಮಣನು ರಾಜನನ್ನು ಸಂತಸದಿಂದ ಸತ್ಕರಿಸಿದನು.

ದಶರಥನಿಗೆ ಆ ಬ್ರಾಹ್ಮಣನಲ್ಲಿದ್ದ ಕಾಮಧೇನುವನ್ನು ಕಂಡು ಅದನ್ನು ತನ್ನದಾಗಿಸಿಕೊಳ್ಳಬೇಕೆಂಬ ಆಸೆ ಮೂಡಿತು. ಬ್ರಾಹ್ಮಣನು ಬೇಡವೆಂದರೂ ರಾಜನು ಕಾಮಧೇನುವನ್ನು ಕರೆದುಕೊಂಡು ಹೋಗಲು ಇದ್ದ ಒಂದು ಆಸರೆಯೂ ತಪ್ಪಿ ಬ್ರಾಹ್ಮಣನು ಇತರರಲ್ಲಿ ಬೇಡಿ ತಿಂದು ಜೀವಿಸುವ ಸ್ಥಿತಿಗೆ ಬಂದನು.

ಇದನ್ನು ಕಂಡು ಆ ಬ್ರಾಹ್ಮಣನ ಮಗನಾದ ಪರಶುರಾಮನು ದಶರಥ ರಾಜನ ಮೇಲೆ ಕೋಪಗೊಂಡು ಸೇಡು ತೀರಿಸಿಕೊಳ್ಳಲು ತಾನೂ ಬೆಟ್ಟದ ಮೇಲೇರಿ ಹನ್ನೆರಡು ವರುಷ ಕಠಿಣ ತಪಸನ್ನು ಆಚರಿಸಲು ನಿರ್ಧರಿಸಿದನು. ಇವನ ಉಗ್ರ ತಪಸ್ಸಿಗೆ ಬ್ರಹ್ಮನೇ ಪ್ರತ್ಯಕ್ಷನಾಗಿ ಅವನಿಗೆ ಅನೇಕ ಸಿದ್ಧಿಗಳನ್ನು ಕರುಣಿಸಿದನು.

ಇದರಿಂದ ಬಲಗೊಂಡ ಪರಶುರಾಮನು ದಶರಥನನ್ನು ಯುದ್ಧಕ್ಕೆ ಆಹ್ವಾನಿಸಿ ತನ್ನ ಕೊಡಲಿಯಿಂದ ಅವನ ಶಿರವನ್ನು ತುಂಡರಿಸಿದನು. ಇದರಿಂದಲೂ ಅವನ ಕ್ರೋಧ ಕಡಿಮೆಯಾಗದಿರಲು ಅನೇಕ ರಾಜ್ಯಗಳಿಗೆ ನುಗ್ಗಿ ಎಲ್ಲಾ ರಾಜರನ್ನೂ ಸಂಹರಿಸಲು ಮೊದಲು ಮಾಡಿದನು.

ಈ ಕಡೆ ದಶರಥನ ಇಬ್ಬರು ಮಕ್ಕಳಾದ ರಾಮ ಮತ್ತು ಲಕ್ಷ್ಮಣರನ್ನು ರಾಣಿಯು ಅರಮನೆಯ ನೆಲಮಾಳಿಗೆಯಲ್ಲಿ ಸುರಕ್ಷಿತವಾಗಿ ಮುಚ್ಚಿಟ್ಟಿದ್ದು ಪರಶುರಾಮನಿಂದ ಕಾಪಾಡಿದಳು. ಹುಡುಗರು ಪ್ರಾಯಕ್ಕೆ ಬಂದೊಡನೆಯೇ ನೆಲಮಾಳಿಗೆಯಿಂದ ಈಚೆಗೆ ಬಂದು ಶಸ್ತ್ರ ವಿದ್ಯೆಯನ್ನೆಲ್ಲಾ ಕಲಿತು ಪರಶುರಾಮನನ್ನು ಹುಡುಕಿಕೊಂಡು ಹೋಗಿ ಯುದ್ಧದಲ್ಲಿ ಅವನನ್ನು ಕೊಂದು ಜಂಬೂದ್ವೀಪಕ್ಕೆ ಅರಸರಾದರು.

ಇದೇ ಕಾಲದಲ್ಲಿ ದಶಗ್ರೀವನೆಂಬ ರಾಕ್ಷಸರಾಜನಿಗೆ ಮಗಳು ಜನಿಸಿದಳು. ಅವಳಿಂದ ತಂದೆಗೇ ಕೇಡು ಇರುವುದೆಂದು ಜ್ಯೋತಿಷಿಗಳು ನುಡಿದರು. ಇದನ್ನು ಕೇಳಿ ದಶಗ್ರೀವನು ಮಗುವನ್ನು ಒಂದು ಪೆಟ್ಟಿಗೆಯಲ್ಲಿ ಮಲಗಿಸಿ ಅದನ್ನು ನದಿಯಲ್ಲಿ ತೇಲಿಬಿಟ್ಟನು. ಒಬ್ಬ ಋಷಿಯು ಪೆಟ್ಟಿಗೆಯನ್ನು ತೆಗೆದು ಅದರಲ್ಲಿದ್ದ ಮುದ್ದಾದ ಹೆಣ್ಣು ಮಗುವನ್ನು ನೋಡಿ ಅದನ್ನು ತಾನೇ ಸಾಕಲು ನಿರ್ಧರಿಸಿ ಆ ಮಗುವಿಗೆ ಸೀತೆ ಎಂದು ಹೆಸರಿಸಿದನು.

ಒಂದು ಸಲ ರಾಮ-ಲಕ್ಷ್ಮಣರು ಸಂಚಾರ ಮಾಡುತ್ತ ಅರಣ್ಯದಲ್ಲಿ ಈ ಮುನಿಕನ್ಯೆಯನ್ನು ಕಂಡು ಅವಳ ಸೌಂದರ್ಯಕ್ಕೆ ಮಾರು ಹೋದರು. ಅವಳನ್ನು ಒಲಿಸಿಕೊಂಡು ತಮ್ಮ ರಾಜ್ಯಕ್ಕೆ ಕರೆದೊಯ್ಯುವ ಯತ್ನದಲ್ಲಿ ಸಫಲರಾಗಿ ಆಕೆಯೊಂದಿಗೆ ತಮ್ಮ ರಾಜಕ್ಕೆ ಹೊರಟರು.

ಕೆಲವು ದಿನಗಳ ನಂತರ ರಾಮ-ಲಕ್ಷ್ಮಣರು ಬೇಟೆಗೆ ಹೊರಡುವ ಮುನ್ನ ಸೀತೆಯ ಹತ್ತಿರ ಯಾರೂ ಬಾರದಂತೆ ಮಂತ್ರಮಂಡಲವನ್ನು ರಚಿಸಿ ಭದ್ರಪಡಿಸಿ ಹೋದರು. ಒಂಟಿಯಾಗಿದ್ದ ಸೀತೆ ವಿಮಾನದಲ್ಲಿ ಹಾರಿ ಹೋಗುತ್ತಿದ್ದ ದಶಗ್ರೀವನ ದೃಷ್ಟಿಗೆ ಬಿದ್ದಳು, ಅವಳನ್ನು ಅಪಹರಿಸಲು ಯತ್ನಿಸಿ ಮಂತ್ರಮಂಡಲದ ಶಿಕ್ಷೆಯಲ್ಲದೆ ಗೃಧ್ರವೊಂದರ ಕಾವಲಿನಿಂದಾಗಿ ಅವನು ವಿಫಲನಾದನು. ಆಗ ದಶಗ್ರೀವನು ಗೃಧ್ರದೊಂದಿಗೆ ಹೋರಾಡಿ ಅದನ್ನು ಕೊಂದು, ಬ್ರಾಹ್ಮಣ ವೇಷದಿಂದ ಬಂದ ಭಿಕ್ಷೆ ಬೇಡುವಂತೆ ನಟಿಸಿ, ಸೀತೆ ಭಿಕ್ಷೆನೀಡುವಾಗ ಅವಳ ಕೈ ಮಂತ್ರಮಂಡಲದಿಂದ ಹೊರ ಬಂದೊಡನೆಯೇ ಆಕೆಯನ್ನು ಹಿಡಿದೆಳೆದು

**ಶ್ರೀ ರಾ. ಅನಂತನಾರಾಯಣ**

ಕೊಂಡು ತನ್ನ ರಾಜ್ಯವಾದ ಲಂಕೆಗೆ ಹಾರಿ ಹೋದನು.

ರಾಮ ಲಕ್ಷ್ಮಣರು ಬೇಟೆಯಿಂದ ಹಿಂತಿರುಗಿ ಸೀತೆ ಇಲ್ಲದಿರುವುದನ್ನು ಕಂಡು ವಿಹ್ವಲರಾದರು. ಆಕೆಯನ್ನು ಕಾಡಿನ ಮೂಲೆ ಮೂಲೆಯೂ ಹುಡುಕಿದರು. ಹೀಗೆ ಹನ್ನೆರಡು ವರ್ಷ ಕಾಡು, ಬೆಟ್ಟಗಳನ್ನು ಸುತ್ತಾಡಿದರು. ಒಂದು ಹೇಮಂತ ಋತುವಿನಲ್ಲಿ ಎರಡು ಬಲಿಷ್ಠವಾದ ಕಪಿಗಳು ಮಲ್ಲಯುದ್ಧ ಮಾಡುತ್ತಿರುವುದನ್ನು ಕಂಡರು. ಆ ಎರಡು ಕಪಿಗಳು ನೋಡಲು ಒಂದೇ ತರಹವಿದ್ದು ಸಹೋದರರಾಗಿದ್ದರು. ಸುಗ್ರೀವ ನಂದ ಎಂಬ ಆ ಎರಡು ಕಪಿಗಳಲ್ಲಿ ನಂದನೆಂಬ ಕಪಿ ತನಗೆ ಮಲ್ಲಯುದ್ಧದಲ್ಲಿ ಸಹಾಯ ಮಾಡುವುದಾದರೆ ತನ್ನ ಪಡೆಯವರನ್ನೆಲ್ಲಾ ಸೀತೆಯನ್ನು ಹುಡುಕಲು ಕಳುಹಿಸುವೆನೆಂದು ಹೇಳಲು ಅದಕ್ಕೆ ರಾಮನು ಒಪ್ಪಿದನು. ಇಬ್ಬರೂ ಕಾದಾಡುವಾಗ ನಂದನು ತನ್ನನ್ನು ರಾಮನು ಗುರುತಿಸಲೆಂದು ತನ್ನ ಹಣೆಗೆ ಕನ್ನಡಿಯೊಂದನ್ನು ಕಟ್ಟಿಕೊಂಡಿದ್ದನು. ಇಬ್ಬರು ಕಾದಾಡುತ್ತಿರುವಾಗ ರಾಮನು ಬಾಣದಿಂದ ಸುಗ್ರೀವನನ್ನು ಸಂಹರಿಸಿದನು.

ನಂತರ ನಂದನು ತನ್ನ ಸಂಗಡಿಗರಿಗೆ ಏಳು ದಿನಗಳಲ್ಲಿ ಸೀತೆಯನ್ನು ಹುಡಕಬೇಕು. ಇಲ್ಲದಿದ್ದಲ್ಲಿ ನಿಮ್ಮೆಲ್ಲರ ಕಣ್ಣುಗಳನ್ನು ಕೀಳಿಸುವೆ ಎಂದು ಆಜ್ಞೆ ಮಾಡಿದನು. ಕಪಿಗಳು ಏಳು ದಿನಗಳವರೆಗೆ ಸೀತೆಯ ಇರವನ್ನು ಹುಡುಕುವಲ್ಲಿ ವಿಫಲವಾದವು. ಏಳನೆಯ ದಿನ ಲಪೂಫ ಎಂಬ ಹೆಣ್ಣು ಕಪಿಯೊಂದು ಮರದ ಮೇಲೆ ಕುಳಿತಿದ್ದಾಗ ಆ ಮರದಲ್ಲಿ ಪಕ್ಷಿಯೊಂದು ತನ್ನ ಮರಿಗೆ "ಮಗು ನಿನಗೆ ನಾಳೆ ಬೇಕಾದಷ್ಟು ಕಪಿಗಳ ಕಣ್ಣುಗಳನ್ನು ತಿನ್ನಲು ಕೊಡುವೆ ಆ ಕಪಿಗಳಿಗೆ ಸೀತೆಯು ಲಂಕಾಪುರದಲ್ಲಿರುವಳು ಎಂಬ ಸಮಾಚಾರವೇ ತಿಳಿದಿಲ್ಲ" ಎಂದು ಹೇಳುತ್ತಿರುವುದನ್ನು ಕೇಳಿಸಿಕೊಂಡಿತು. ಈ ಸುದ್ದಿಯು ಒಡೆಯನಾದ ನಂದನಿಗೆ ಮುಟ್ಟಲು ರಾಮಲಕ್ಷ್ಮಣರ ಸಮ್ಮುಖದಲ್ಲಿ ಸಭೆಯೊಂದು ನಡೆದು ಲಂಕೆಗೆ ದಂಡ ಯಾತ್ರೆ ಹೊರಡಲು ನಿರ್ಧರಿಸಿ ದಾರಿಯಲ್ಲಿ ಅಡ್ಡವಾದ ನದಿಗೆ ಕಲ್ಲು ಸೇತುವೆಯನ್ನು ನಿರ್ಮಿಸುವುದೆಂದು ನಿರ್ಧರಿಸಿದವು. ಸೇತುವೆ ನಿರ್ಮಿಸಲು ಕಪಿಗಳೊಂದಿಗೆ ಆನೆಗಳು, ಕಾಡುಕುದುರೆಗಳೂ ಸೇರಿದವು. ಕಹಳೆ ಕೊಂಬ ನಗಾರಿ ಡೋಲುಗಳ ಸದ್ದು ದಶದಿಕ್ಕುಗಳಿಗೂ ಮುಟ್ಟಿತು. ಈ ಗದ್ದಲಕ್ಕೆ ಭೂಮಿಯೇ ಅದರುವಂತಾಯಿತು.

ಈ ಕಪಿಗಳ ಸೇನೆ ರಾಮನೊಂದಿಗೆ ಬರುತ್ತಿರುವ ಸುದ್ದಿ ದಶಗ್ರೀವನಿಗೆ ಮುಟ್ಟಿತು. ಇದರಿಂದ ರೋಷಗೊಂಡ ಅವನು ತನ್ನ ರಾಕ್ಷಸ ಸೇನೆಯನ್ನು ಕಳುಹಿಸಿದನು. ರಾಕ್ಷಸರು ಯುದ್ಧದಲ್ಲಿ ಸೋತು ದಿಕ್ಕಾಪಾಲಾಗಿ ಓಡಿದರು. ರಾಮನ ಸೈನ್ಯದೊಂದಿಗೆ ಹೋರಾಡುವುದು ಸಾಧ್ಯವಿಲ್ಲ ವೆಂದು ತಿಳಿದ ಇಬ್ಬರು ವೃದ್ಧ ಮಂತ್ರಿಗಳು ಸೀತೆಯನ್ನು ಕರೆದು ಕೊಂಡು ಹೋಗಿ ರಾಮನಿಗೆ ಒಪ್ಪಿಸಿ ಬಿಡು ಎಂದು ಸಲಹೆ ಮಾಡಿದರು. ಪರಸ್ತ್ರೀ ಮೋಹದಿಂದ ಅನಾಹುತವಾಗುವುದೆಂದು ವಿವರಿಸಿದರು. ದಶಗ್ರೀವನು ಇದಕ್ಕೆ ಕಿವಿಗೊಡದೆ ತಾನೇ ಬೆಟ್ಟದ ಮೇಲೇರಿ ಮಂಡಲಗಳನ್ನು ರಚಿಸಿ ಸಿದ್ಧಿ ಪಡೆಯಲು ಉಗ್ರ ತಪಸ್ಸನ್ನು ಮಾಡಲಾರಂಭಿಸಿದನು.

ರಾಮನು ಕಪಿಸೇನೆಯೊಂದಿಗೆ ಲಂಕೆಯನ್ನು ಪ್ರವೇಶಿಸಿ ದಶಗ್ರೀವನನ್ನು ಯುದ್ಧಕ್ಕೆ ಕರೆದನು. ದಶಗ್ರೀವನು ಸಿದ್ಧಿಯಿಲ್ಲದೆ ತಾನು ದುರ್ಬಲನೆಂದು ತಿಳಿದು, ವಿಷಸರ್ಪವೊಂದರ ವಿಷವನ್ನು ತುಪ್ಪದಲ್ಲಿ ಕಲಸಿ ಅದನ್ನು ಬಾಣವೊಂದರ ತುದಿಗೆ ಲೇಪಿಸಿ ಅದನ್ನು ಬಿಲ್ಲಿನ ಹೆದೆಯೇರಿಸಿ ರಾಮನ ಮೇಲೆ ಪ್ರಯೋಗಿಸಿದನು. ಈ ಬಾಣವು ರಾಮನಿಗೆ ತಾಕಲು ನಿಶ್ಚೇತನಗೊಂಡು ಕೆಳಗೆ ಬಿದ್ದನು. ಆಗ ನಂದನ ಕಡೆಯ ಜೀವಕನೆಂಬ ವೈದ್ಯನು ಇದನ್ನು ನೋಡಿ ಹಿಮವಂತ ಪರ್ವತದಲ್ಲಿ ದೊರೆಯುವ ಮೃತ ಸಂಜೀವನೆಂಬ ಮೂಲಿಕೆಯಿಂದ ರಾಮನನ್ನು ಬದುಕಿಸಬಹುದೆಂದು ಹೇಳಿದನು. ಇದನ್ನು ತರಲು ನಂದನೇ ಹೊರಟನು. ಅಲ್ಲಿಗೆ ಹೋಗುವಷ್ಟರಲ್ಲಿ ನಂದನಿಗೆ ಆ ಮೂಲಿಕೆಯ ಹೆಸರೇ ಮರೆತು ಹೋಗಲು ಇಡೀ ಪರ್ವತವನ್ನೇ ಹೊತ್ತು ತಂದನು. ಜೀವಕನು ಅದರಿಂದ ಮೃತ ಸಂಜೀವ ಮೂಲಿಕೆಯನ್ನು ಹುಡುಕಿ ತೆಗೆದು ಅದರಿಂದ ರಾಮನು ಬದುಕುವಂತೆ ಮಾಡಿದನು.

ರಾಮನು ಪುನಃ ದಶಗ್ರೀವ ನೊಂದಿಗೆ ಸಮರಕ್ಕಿಳಿದನು. ದಶಗ್ರೀವನ ಶಕ್ತಿ ಅವನ ಬಲಗಾಲು ಹೆಬ್ಬೆರಳಿನಲ್ಲಿ ಇರುವುದನ್ನು ಮಂತ್ರವಾದಿಗಳಿಂದ ತಿಳಿದ ರಾಮನು ದಶಗ್ರೀವನ ಬಲಗಾಲ ಹೆಬ್ಬೆರಳಿಗೆ ಗುರಿ ಇಟ್ಟು ಬಾಣವನ್ನು ಹೊಡೆಯಲು ದಶಗ್ರೀವನು ಉರುಳಿ ಬಿದ್ದನು. ಇದರಿಂದ ಸಂಪೂರ್ಣವಾಗಿ ಸೋತ ದಶಗ್ರೀವನು ತನ್ನ ಪ್ರಾಣವುಳಿಸುವಂತೆ ರಾಮನನ್ನು ಬೇಡಲು ರಾಮನು ಕರುಣೆಗೊಂಡು ಉಳಿಸಿದನು.

ರಾಮ ಲಕ್ಷ್ಮಣರು ಸೀತೆಯೊಂದಿಗೆ ತಮ್ಮ ರಾಜ್ಯಕ್ಕೆ ಹಿಂತಿರುಗಿದರು. ಹೀಗೆ ರಾಜ್ಯವಾಳುತ್ತಿರಲು ಪ್ರಜೆಗಳಲ್ಲಿ ಏನೋ ಕಾರಣದಿಂದ ಸಮಾಧಾನವೇ ಇರಲಿಲ್ಲ. ರಾಮನು ಧನಕನಕಗಳಿಂದ ಪ್ರಜೆಗಳನ್ನು ತೃಪ್ತಿಗೊಳಿಸಲೆತ್ನಿಸಿದನು. ಆದರೆ ತನ್ನಿಂದಲೇ ಪ್ರಜೆಗಳು ಅಸಮಧಾನಗೊಂಡಿರುವರೆಂದು ಸೀತೆ ಅರಿತಿದ್ದಳು. ತಾನು ಬಹುಕಾಲ ದಶಗ್ರೀವನ ಬಳಿ ಇದ್ದುದರಿಂದ ಪ್ರಜೆಗಳು ತನ್ನ ಶೀಲದ ಬಗ್ಗೆ ಶಂಕಿಸುತ್ತಿರುವರೆಂದು ರಾಮನಿಗೆ ತಿಳಿಸಿ ತಾನು ಭೂಮಿಯೊಳಗೆ ಇಳಿದು ಮರೆಯಾದಳು. ಆ ನಂತರ ರಾಮನು ಸಮುದ್ರಕ್ಕೆ ತೆರಳಿ ಜಲಭೈರವರನ್ನು ನಿಗ್ರಹಿಸಿ ಜಂಬು ದ್ವೀಪಕ್ಕೆ ಹಿಂತಿರುಗಿದನು.

ಹೀಗೆ ಈ ಕಥೆಯಲ್ಲಿ ಲಂಕೆಯೊಂದನ್ನು ಬಿಟ್ಟು ನಮಗೆ ತಿಳಿದಿರುವ ಋಷ್ಯಮೂಕ, ಅಯೋಧ್ಯೆ, ಮಿಥಿಲಾ ಮುಂತಾದ ಪ್ರದೇಶಗಳ ಹೆಸರೂ ಬರುವುದಿಲ್ಲ. ದಶರಥನಿಗೆ ಇಬ್ಬರೇ ಮಕ್ಕಳಿದ್ದು ಅವನ ಪತ್ನಿಯರ ಹೆಸರೂ ಇಲ್ಲ. ಪರಶುರಾಮ ತನ್ನ ತಂದೆಗೆ ಮಾಡಿದ ಅನ್ಯಾಯಕ್ಕೆ ಅವನನ್ನು ಕೊಲ್ಲುವುದು, ಅವನ ಭಯದಿಂದ ರಾಮ ಲಕ್ಷ್ಮಣರನ್ನು 12 ವರ್ಷ ಅಡಗಿಸಿಡುವುದು ನಮ್ಮ ಕಥೆಯಲ್ಲಿಲ್ಲ.

ಅದ್ಭುತ ರಾಮಾಯಣ ಮತ್ತು ಜೈನ ರಾಮಾಯಣದಂತೆ ಸೀತೆಯು ಇಲ್ಲಿಯೂ

(36 ನೇ ಪುಟ ನೋಡಿ)

( 8 ನೆಯ ಪುಟದಿಂದ )

ಸೇವೆಗಾಗಿ ನೇಮಿಸಿಕೊಳ್ಳಬೇಕೆಂದು ಪ್ರಾರ್ಥಿಸಿರುವುದಲ್ಲದೆ, ರಾಗಪಂಜರದ ವರದ ನವನೀತಾ ಎಂಬ ಕೃತಿಯಲ್ಲಿ ತಾನು ದಾಸಜನಾಗ್ರೇಸರನೆಂದೂ, ತೋಡಿರಾಗದ ಬೃಂದಾವನಲೋಲ ಮತ್ತು ಧನ್ಯಾಸಿರಾಗದ ದಿವ್ಯನಾಮಕೀರ್ತನೆಯಲ್ಲಿ ತಾನು ರಾಮನ ದಾಸನ ದಾಸನೆಂದೂ, ಶ್ರೀರಾಮನನ್ನು ನಾಥ, ಪ್ರಭೋ ಇತ್ಯಾದಿ ಸಂಬೋಧಿಸಿದ್ದಾರೆ. ದಾಸರ ಮತ್ತು ತ್ಯಾಗರಾಜರ ದಾಸ್ಯಭಕ್ತಿಯು ಮುಕುಂದಮಾಲಾ ಸ್ತೋತ್ರದ "ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ ಭೃತ್ಯಸ್ಯ ಭೃತ್ಯ ಇತಿಮಾಂ ಸ್ಮರ ಲೋಕನಾಥ" ಎಂಬ ವಿನೀತ ಭಾವದ ಪ್ರತೀಕವಾಗಿದೆ.

ಸಖ್ಯಭಕ್ತಿಯು ಎಂಟನೆಯದು. ಹೀಗೆಂದರೆ ಪರಮಾತ್ಮನನ್ನು ಸ್ನೇಹಿತನೆಂದು ಭಾವಿಸಿ ಭಜಿಸುವುದು. ಈ ಭಕ್ತಿಯ ಲಕ್ಷಣವನ್ನು ಪುರಂದರದಾಸರು "ಹರಿಯಲ್ಲಿ ಭಕ್ತಿಯ ಗೆಳೆತನವಿಟ್ಟಾ। ತರುಣಿ ಸಂಪದ ಪ್ರಜೆಗಳನೆಲ್ಲಬಿಟ್ಟಾ। ಕರುಮತ್ರಯಂಗಳ ನಿವಹದಿಕೆಟ್ಟಾ। ತಿರುಗಿಬರುವ ಉರುಬಟ್ಟೆಯ ಮೆಟ್ಟಾ। ಪುರಂದರವಿಠ್ಠಲನಲ್ಲಿ ಚಿತ್ತವಿಟ್ಟಾ। ನರಸಿಂಹನೊಲಿಸಿ ಲಿಂಗಾಂಗವಸುಟ್ಟಾ।" ಎಂದು ನಿರೂಪಿಸಿದ್ದಾರೆ. ಈ ಭಾವದಲ್ಲಿ ಭಗವಂತನಿಗೂ ಭಕ್ತನಿಗೂ ಇರುವಸಲಿಗೆ ಅತ್ಯಂತ ರಮಣೀಯ. ಭಕ್ತನು ತನ್ನ ಸ್ವಾಮಿಯನ್ನು ಮಿತ್ರನೆಂಬ ಸಲಿಗೆಯಿಂದ ಸಂಬೋಧಿಸುತ್ತಾನೆ. ಕೃಷ್ಣಾರ್ಜುನರ ಸಲಿಗೆ ಇದಕ್ಕೆ ಉತ್ತಮ ನಿದರ್ಶನ. ಸುಗ್ರೀವ ಮತ್ತು ವಿಭೀಷಣರು ಶ್ರೀರಾಮನ ಆಪ್ತಸ್ನೇಹಿತರು. ದಾಸರ ಪ್ರಸಿದ್ಧವಾದ 'ಎನಗೂ ಆಣೆರಂಗ ನಿನಗೂ ಆಣೆ। ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ॥' ಎಂಬ ಕೀರ್ತನೆಯಲ್ಲಿ ಸರಸದ ಧಾಟಿಯ ಒಂದು ಒಡಂಬಡಿಕೆಯನ್ನು ನೋಡಬಹುದು. ದೇವರ ಜೊತೆಯಲ್ಲಿ ಪಂಥಕಟ್ಟುವ ದಾಸರ ಕೆಚ್ಚು ಆಶ್ಚರ್ಯಕರ. ಇಲ್ಲಿನ ಸಲಿಗೆ ಅಸಾಮಾನ್ಯ. ಹೀಗೆಯೇ ದೇವರನ್ನು ಕುರಿತು ಹಾಡಿರುವ ನಿಂದಾಸ್ತುತಿಗಳು ಸಖ್ಯಭಾವದ ಪ್ರತೀಕಗಳಾಗಿವೆ. ತ್ಯಾಗರಾಜರು ತಾವು ರಾಮನ ಆಪ್ತ ಮಿತ್ರನೆಂದು ಭಾವಿಸಿಕೊಂಡು, ಯದುಕುಲ ಕಾಂಭೋಜಿರಾಗದ ಚೆಲಿಮಿನಿ ಜಲಜಾಕ್ಷು, ಬೇಗಡೆರಾಗದ ಸ್ವಾಮಿಕಿ ಸರಿ ಮತ್ತು ನಾಗಗಾಂಧಾರಿ ರಾಗದ ಕೃತಿಗಳಲ್ಲಿ ಶ್ರೀರಾಮನನ್ನು ತ್ಯಾಗರಾಜುನಿ ಮಿತ್ರ, ತ್ಯಾಗರಾಜ ಸಖುಡು ಎಂದು ಕರೆದುಕೊಂಡಾಡಿದ್ದಾರೆ.

ಒಂಭತ್ತನೆಯ ವಿಧವಾದ ಭಕ್ತಿ ಆತ್ಮನಿವೇದನ ಭಕ್ತನು ತನ್ನ ಸರ್ವಸ್ವವನ್ನೂ ಪರಮಾತ್ಮನಲ್ಲಿ ಅರ್ಪಿಸಿ ಧನ್ಯನಾಗುವುದೇ ಆತ್ಮನಿವೇದನ. ಇದೇ ಶರಣಾಗತಿ. ಭಗವಂತನು ಶರಣಾಗತ ರಕ್ಷಕನೆಂಬ ಬಿರುದನ್ನು ಪಡೆದಿರುವುದರಿಂದ ಭಕ್ತರು ಆತ್ಮನಿವೇದನದಿಂದ ಅವನ ಸಾಕ್ಷಾತ್ಕಾರವನ್ನು ಪಡೆಯಲು ಯತ್ನಿಸುತ್ತಾರೆ. ವೆಂಕಟರಮಣಸ್ವಾಮಿಯ ಸ್ವರೂಪವೇ ಭಗವದ್ಗೀತೆಯ ಮುಖ್ಯ ಸಂದೇಶವಾದ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥" ಆತ್ಮಾರ್ಪಣೆಯ ತತ್ತ್ವದ ಸಂಕೇತವಾಗಿದೆ. ಶ್ರೀವೈಷ್ಣವಸಿದ್ಧಾಂತದಲ್ಲಿ ಇದು ಪ್ರಪತ್ತಿ. ಭಗವಂತನು ತನ್ನನ್ನು ರಕ್ಷಿಸುತ್ತಾನೆ – ರಕ್ಷಿಷ್ಯತೀತಿ ವಿಶ್ವಾಸಃ – ಎಂಬ ದೃಢ ವಿಶ್ವಾಸವು ಈ ತತ್ತ್ವದ ಒಂದು ಮುಖ್ಯಾಂಶ. ಈ ರೀತಿ ನೈಚ್ಯಾನುಸಂಧಾನದಿಂದ ಶರಣಾಗತನಾದ ಭಕ್ತನನ್ನು ಭಗವಂತನು ಉದ್ಧಾರಮಾಡುತ್ತಾನೆ. ಆತ್ಮನಿವೇದನವನ್ನು ಕುರಿತು ಪುರಂದರದಾಸರು ಈ ರೀತಿ ವಿವರಿಸಿದ್ದಾರೆ "ಹರಿಗೆ ತನ್ನಾತ್ಮ ನಿವೇದನದಿಂದ। ಉರಿ-ಜಲ-ಮಣ್ಣು-ಬಯಲು-ಗಾಳಿಹೊಂದ। ಸ್ವರೂಪನ ಹರಿಯಂಘ್ರಿಗರ್ಪಿಸಿ ನಿಂದ। ಹರುಷವನುಂಬ ಉನ್ನಾಹಗಳಿಂದ। ಪುರಂದರವಿಠಲ ರಾಯನ ದಯದಿಂದ। ಸುರಖುಸಿಯೊಲುಮೆ ಗೆಲ್ಲವು ನಿಜಾನಂದ"

ಶರಣು ಶರಣು ಶರಣ್ಯವಂದಿತ,
ಬಿನ್ನಹಕೆ ಬಾಯಿಲ್ಲ,
ಬರಬೇಕೋ ರಂಗಯ್ಯ ನೀ ಬರಬೇಕೊ,
ದಯೆಮಾಡಿ ಸಲಹಯ್ಯ,
ಹರಿ ನೀನೇಗತಿ,
ತಾಯಿ ಲಕುಮಿ ತಂದೆ ವಿಠ್ಠಲ,

– ಮುಂತಾದ ರಚನೆಗಳಲ್ಲಿ ಭಗವಂತನಿಗೆ ಶರಣು ಹೋಗಿದ್ದಾರೆ.

ತ್ಯಾಗರಾಜರು ಪಂತುವರಾಳಿರಾಗದ ಸಾರಮೇಗಾನಿ ಎಂಬ ಕೀರ್ತನೆಯಲ್ಲಿ ಶ್ರೀರಾಮನನ್ನು 'ಶರಣಾಗತ ಪರಿಪಾಲನ ಬಿರುದಾಂಕ' ನೆಂದು ಹೊಗಳಿದ್ದಾರೆ. ಕಾಲಹರಣಮೇಲರಾ ಎಂಬ ಶುದ್ಧ ಸಾವೇರಿರಾಗದ ಕೃತಿ, ರೀತಿ ಗೌಳರಾಗದ ನನ್ನು ವಿಡಚಿ, ಮುಂತಾದ ಕೃತಿಗಳಲ್ಲಿ ತನ್ನ ತನುಮನದೇಹಾದಿ ಸರ್ವಸ್ವವನ್ನು ಆತ್ಮನಿವೇದನ ಮಾಡಿಕೊಂಡಿದ್ದಾರೆ. ಕಲಿಗಿಯುಂಟೇ ಎಂಬ ಕೀರವಾಣಿರಾಗದ ಕೃತಿಯಲ್ಲೂ, ಮೀವಲ್ಲ ಗುಣದೋಷ ಎಂಬ ಕಾಪಿರಾಗದ ಕೃತಿಯಲ್ಲೂ ನೈಚ್ಯಾನುಸಂಧಾನವು ವ್ಯಕ್ತವಾಗಿದೆ. ಏನಾಟಿ ನೋಮು ಫಲಮೋ ಎಂಬ ಭೈರವಿರಾಗದ ಕೃತಿ, ರವಿಚಂದ್ರಿಕೆರಾಗದ ಮಾಕೇಲರಾ ಮತ್ತು ವನಾವಳಿರಾಗದ ಅಪರಾಧಮುಲನು ಎಂಬ ಕೃತಿಗಳು ಆತ್ಮನಿವೇದನ ಭಕ್ತಿಗೆ ಉದಾಹರಣೆಗಳು.

ನವವಿಧ ಭಕ್ತಿಗಳಲ್ಲದೆ ವಾತ್ಸಲ್ಯ ಮತ್ತು ಮಧುರ ಭಕ್ತಿಗಳೆಂಬ ಭಾವಗಳಿವೆ. ಪರಮಾತ್ಮನನ್ನು ತನ್ನ ಮಗುವೆಂದು ಭಕ್ತನು ಭಾವಿಸುವುದು ಅಥವಾ ಭಕ್ತನು ತಾನೇ ಪರಮಾತ್ಮನ ಮಗುವೆಂದು ಭಾವಿಸುವುದು ವಾತ್ಸಲ್ಯಭಾವ. ಪುರಂದರದಾಸರ ರಚನೆಗಳಲ್ಲಿ ಈ ಭಾವದ ನಿರೂಪಣೆಯು ತನ್ನದೇ ಆದ ಒಂದು ಸೊಬಗನ್ನು ಪಡೆದಿದೆ. ಇದರ ತಳಹದಿಯು ರಮ್ಯವಾದುದು. ತಾಯಿ ಅಥವಾ ತಂದೆ ಮಕ್ಕಳ ಪ್ರೀತ್ಯಾದರಗಳೇ ಇದರ ತಿರುಳು, ಮಾತೃವಾತ್ಸಲ್ಯಕ್ಕೆ ಇದರಲ್ಲಿ ವಿಶೇಷವಾದ ಮನ್ನಣೆ. ಇಲ್ಲಿಯ ವಿಶ್ವಾಸಾಭಿಮಾನಗಳಿಗೆ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲ, ಇದು ಅವ್ಯಾಜವಾದುದು. ಭಕ್ತನು ತನ್ನ ಅಧಿದೇವತೆಯನ್ನು ತನ್ನ ಮಗುವೆಂದೇ ಭಾವಿಸಿ ತನ್ಮೂಲಕ ಪರಮಾತ್ಮನ ಸೇವೆ ಸಲ್ಲಿಸುವ ಈ ಮಾರ್ಗದಲ್ಲಿರುವ ಪ್ರೇಮ ಪರಿಶುದ್ಧವಾದುದು. ಇದಕ್ಕೆ ಯಶೋದೆ–ಕೃಷ್ಣರ ಬಾಂಧವ್ಯವು ಆದರ್ಶಪ್ರಾಯ. ದಾಸರು ಈ ಭಾವವನ್ನು ಅದ್ವಿತೀಯವಾಗಿ ಚಿತ್ರಿಸಿದ್ದಾರೆ. ಶಿಶುಲೋಕದಲ್ಲಿ ಯಾವ ಯಾವ ಸೌಭಾಗ್ಯ ಸೊಬಗುಗಳನ್ನು ಕಾಣಬಹುದೋ ಅವೆಲ್ಲವನ್ನೂ ಹಲವಾರು ವಿಧದಲ್ಲಿ ಚಿತ್ರಿಸಿದ್ದಾರೆ. ಅದ್ವಿತೀಯನಾದ ಮುದ್ದುಕಂದನಾದ ಪರಮಾತ್ಮನ ಮಹಿಮಾತಿಶಯಗಳನ್ನೂ, ನಡೆನುಡಿಗಳನ್ನೂ ಹೃದಯ ಹಿಗ್ಗುವಂತೆ ಕೂಸನ್ನು ಕಂಡಿರಾ ಜ್ಞಾನಿಗಳೆಲ್ಲ ಎಂಬ ಕೀರ್ತನೆಯಲ್ಲಿ ಚಿತ್ರಿಸಿ, ಯಾದವ ನೀ ಬಾ, ಓಡಿಬಾರೈ ವೈಕುಂಠಪತಿ ನಿನ್ನ ಎಂಬ ಕೀರ್ತನೆಗಳಲ್ಲಿ ಆವೇಶದಿಂದ ಅಂಗಲಾಚಿ ಬೇಡಿಕೊಳ್ಳುವರು. ಅಂಬೆಗಾಲಿಕ್ಕುತ ಬಂದ ಗೋವಿಂದ, ಕೊಳಲನೂದುವುದು ಬಲು ಚೆಂದಾ ಎಂದು ಶಿಶು ಗೋಪಾಲನನ್ನು ಕಂಡು ಹಿಗ್ಗುವರು. ಇಂತಹಾ ಅಸಮಾನನಾದ ಶಿಶುವನ್ನು ಪಡೆದ ಯಶೋದೆಯ ಪುಣ್ಯಕ್ಕೆ 'ಎಂಥಾ ಪುಣ್ಯವೆ ಗೋಪಿ' ಎಂಬ ಕೀರ್ತನೆಯಲ್ಲಿ ತಲೆದೂಗುವರು. ಜಗದೋದ್ಧಾರನ, ಏನಾಯಿತು ರಂಗಗೆ ನೋಡಿರಮ್ಮ, ಪೋಗದಿರೆಲೊರಂಗ ಬಾಗಿಲಿಂದಾಚೆಗೆ, ಮನೆಯೊಳಗಾಡೊ ಗೋವಿಂದ, ಎಷ್ಟು ದುಷ್ಟನೆ ಯಶೋದೆ ನಿನ್ನಮಗ, ದೃಷ್ಟಿ ತಾಗಿತೆ ನಮ್ಮ ಕೃಷ್ಣರಾಯಗೆ, ದೂರುಮಾಡುವರೇನೆ, ಗುಮ್ಮನೆಲ್ಲಿಹ ತೋರಮ್ಮ, ಇತ್ಯಾದಿ ಅನೇಕ ಕೀರ್ತನೆಗಳಲ್ಲಿ ದಾಸರು ವಾತ್ಸಲ್ಯಭಾವವನ್ನು ನಿರೂಪಿಸಿ ಚಿತ್ರಿಸಿದ್ದಾರೆ. ತ್ಯಾಗರಾಜರು ಶಹಾನರಾಗದ ರಾಮರಾಮರಾಮ ಎಂಬ ಕೃತಿಯಲ್ಲಿ ಶ್ರೀರಾಮನು ತನ್ನ ಸಂಗಾತಿಗಳೊಡನೆ ಆಡುತ್ತಿದ್ದ ಭಾವವನ್ನು ವ್ಯಕ್ತಗೊಳಿಸಿದ್ದಾರೆ. ಲಲಿತರಾಗದ ಸೀತಮ್ಮ ಮಾಯಮ್ಮ ಎಂಬ ಕೃತಿಯಲ್ಲಿ ಶ್ರೀರಾಮನನ್ನು ತನ್ನ ತಂದೆಯೆಂದು ಭಾವಿಸಿ, ನಾಗಗಾಂಧಾರಿರಾಗದ ಓ ರಾಮ

ರಾಮ ಎಂಬ ಕೃತಿಯಲ್ಲಿ ರಾಮನನ್ನು ಬಂಧುರತ್ನನೆಂದು ಕರೆದಿದ್ದಾರೆ. ಶಂಕರಾಭರಣರಾಗದ ರಾಮಾ ನಿನ್ನು ವಿನಾ ಮತ್ತು ಕೇದಾರರಾಗದ ರಾಮಾ ನೀವ್ವೆ ಎಂಬ ಕೃತಿಗಳಲ್ಲಿ ಶ್ರೀರಾಮನು ತಾಯಿ, ತಂದೆ, ಸಹೋದರ, ಸ್ನೇಹಿತ ಮತ್ತು ಸಕಲೈಶ್ವರ್ಯವೆಂದೂ, ಕಾಪಿರಾಗದ ಪಾಹಿ ಕಲ್ಯಾಣರಾಮ ಎಂಬ ಕೃತಿಯಲ್ಲಿ ಪರಮಾತ್ಮನು ತಮ್ಮ ಸರ್ವಸ್ವವೆಂದು ಹೇಳಿದ್ದಾರೆ.

ಮತ್ತೊಂದು ಮುಖ್ಯವಾದ ಭಾವ ಮಧುರ ಭಾವ. ಇದರಲ್ಲಿ ಭಕ್ತನು ತಾನು ಸತಿ ಎಂದೂ ಪರಮಾತ್ಮನು ಪತಿ ಎಂದೂ ಭಾವಿಸಿ ಆರಾಧಿಸುವನು ಇದಕ್ಕೆ ಕಾಂತಾಸಕ್ತಿ ಅಥವಾ ನಾಯಕ ನಾಯಿಕಾ ಭಾವವೆಂದೂ ಹೆಸರು. ದಾಸರು ಗೋಪಿಯರ ಹೃದಯಾಂತರಾಳದ ಪರಿಶುದ್ಧವಾದ ಪ್ರೇಮವನ್ನು ಬಗೆಬಗೆಯಾಗಿ ಚಿತ್ರಿಸಿದ್ದಾರೆ. ಜೀವಾತ್ಮ ಪರಮಾತ್ಮರಲ್ಲಿರುವ ಮಧುರ ಬಾಂಧವ್ಯವು ಇದರ ಜೀವಾಳ. ಇದರಲ್ಲಿ ಆತ್ಮಾರ್ಪಣೆಯ ಪರಾಕಾಷ್ಠೆಯನ್ನು ಕಾಣಬಹುದು. ಚೈತನ್ಯ ಪಂಥದಲ್ಲಿ ಮತ್ತು ಶ್ರೀರಾಮಕೃಷ್ಣ ಪರಮಹಂಸರಲ್ಲಿ ಈ ಭಾವದ ಪರಮಾವಧಿಯನ್ನು ಕಾಣಬಹುದು. ಪುರಂದರದಾಸರು ಹರಿದಾಸರ ಜೀವನವನ್ನೇ ಮುತ್ತೈದೆಯತನಕ್ಕೆ, ಮುತ್ತೈದೆಯಾಗಿರಬೇಕು ಮುದದಿಂದಲಿ, ಹತ್ತುನೂರು ನಾಮದೊಡೆಯ ಹರಿಪತಿಯೆಂದು ಎಂಬ ಕೀರ್ತನೆಯಲ್ಲಿ ಹೋಲಿಸಿದ್ದಾರೆ. ಈ ಭಾವವು ಅನೇಕ ಕೀರ್ತನೆಗಳಲ್ಲೂ, ಸುಳಾದಿಗಳಲ್ಲೂ ವ್ಯಕ್ತವಾಗಿದೆ. ತ್ಯಾಗರಾಜರು ರೀತಿಗೌಳರಾಗದ ಚೇರರಾವದೇಮಿ, ಮಂಜರಿರಾಗದ ಪಟ್ಟಿವಿಡುವರಾದು, ಯದುಕುಲ ಕಾಂಭೋಜಿರಾಗದ ದಯ ಸೇಯವೈಯ್ಯ, ಹರಿಕಾಂಭೋಜಿರಾಗದ ಚೆನಿತೋಡಿ ತೇವೆ ಮುಂತಾದ ಕೃತಿಗಳಲ್ಲಿ ಮಧುರಭಾವವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ದರ್ಬಾರ್ ರಾಗದ ರಾಮಾಭಿರಾಮ ಎಂಬ ಕೃತಿಯಲ್ಲಿ "ರಾಮಾಭಿರಾಮ! ನಾನು ನಿನ್ನಲ್ಲಿ ಬರಲು ಬಹಳ ಕಾತುರನಾಗಿದ್ದೇನೆ. ಆದರೆ ನಿನಗೆ ನನ್ನ ಮೇಲೆ ದಯೆಯಿಲ್ಲ. ಈ ರೀತಿ ನನಗೆ ಕಷ್ಟ ಕೊಡುವುದರಿಂದ ಏನು ಪ್ರಯೋಜನ. ನನ್ನ ಮನಸ್ಸೆಂಬ ಕನ್ಯೆಯು ನಿನ್ನಲ್ಲಿ ಅನುರಕ್ತಳಾಗಿದ್ದಾಳೆ. ಆದರೆ ಅವಳ ಕೈಹಿಡಿದು ನೀನು ರಕ್ಷಿಸುತ್ತಿಲ್ಲ. ನಾನು ನಿನ್ನಲ್ಲಿ ಅನುರಾಗದಿಂದ ಸೇವೆ ಮಾಡುತ್ತಿದ್ದರೂ ನಿನ್ನ ರೀತಿಯೇ ಬೇರೆಯಾಗಿದೆ. ನನ್ನ ಹಣೆಯ ಬರಹವು ಹೇಗಿದೆಯೋ ತಿಳಿಯದು, ನನ್ನ ಹೃದಯದಲ್ಲಿ ನಿನಗೆ ಸೌಕರ್ಯವಾದ ಹಾಸಿಗೆಯನ್ನು ಸಿದ್ಧಪಡಿಸಿದ್ದೇನೆ. ಆದರೆ ಅದನ್ನು ಉಪಯೋಗಿಸಿ ನನ್ನನ್ನು ಸುಖಪಡಿಸದೆ ತೊಂದರೆಗೆ ಈಡುಮಾಡಿದ್ದೀಯೆ. ಹೀಗೆ ಮಾಡುವುದರಿಂದ ನಿನಗೇನು ಪುಣ್ಯ? ನೀನೇ ನನ್ನ ಮೇಲೆ ದಯೆತೋರಿ ಕಾಪಾಡಬೇಕು" ಎಂದು ಬೇಡಿಕೊಂಡಿದ್ದಾರೆ.

ಈ ರೀತಿ ಪುರಂದರದಾಸರೂ, ಅವರ ಕೀರ್ತನೆಗಳಿಂದ ಸ್ಫೂರ್ತಿಪಡೆದ ತ್ಯಾಗರಾಜರೂ ನವವಿಧ ಭಕ್ತಿಗಳನ್ನೂ, ಅವುಗಳ ಸೊಬಗು ಮತ್ತು ವೈಶಿಷ್ಟ್ಯಗಳನ್ನೂ ತಮ್ಮ ಸುಂದರವಾದ ಭಾವಪೂರಿತವಾದ ಕೃತಿಗಳಲ್ಲಿ ಚಿತ್ರಿಸಿ ಹಾಡಿರುವುದಲ್ಲದೆ ಭಕ್ತಿಪೂರಿತವಾದ ಸಂಗೀತ ಹಾಗೂ ಸಾಹಿತ್ಯದಿಂದ ಆತ್ಮೋನ್ನತಿ ಮತ್ತು ಸಮಾಜ ಶುದ್ಧೀಕರಣವನ್ನೂ, ವೇದ, ಶಾಸ್ತ್ರ, ಪುರಾಣ, ಆಗಮ ಮತ್ತು ಇತಿಹಾಸಗಳ ಅರ್ಥವನ್ನು ತಮ್ಮ ವಿಪುಲವಾದ ಕೃತಿರತ್ನಗಳ ಮುಖಾಂತರ ಪ್ರಚಾರ ಮಾಡಿ ಸಾಧಿಸಿದರು. ಇವರಿಬ್ಬರೂ ಭಕ್ತಶ್ರೇಷ್ಠರಾದ ವಾಗ್ಗೇಯಕಾರರು. ಇಬ್ಬರೂ ತಮ್ಮ ಹೃದಯಕ್ಕಾಗಿ ಹಾಡಿದರು. ★

---

( 34 ನೆಯ ಪುಟದಿಂದ )

ದಶಗ್ರೀವನ ಮಗಳು. ಜನಕ ಮತ್ತು ವಿಶ್ವಾಮಿತ್ರರ ಹೆಸರೇ ಇಲ್ಲಿ ಬಂದಿಲ್ಲ. ಈ ಕಥೆಯಲ್ಲಿ ರಾಮ – ಲಕ್ಷ್ಮಣರಿಬ್ಬರೂ ಸೀತೆಯಲ್ಲಿ ಅನುರಕ್ತರಾಗುತ್ತಾರೆ. ಕಪಿಗಳ ಸೇಣಸಾಟದ ಕಥೆಯಲ್ಲಿ ವಾಲಿಗೆ ಬದಲಾಗಿ ನಂದನ ಹೆಸರಿದ್ದು ಅವನ ಸೋದರ ಸುಗ್ರೀವನೇ ಮಡಿದು ನಂದನೇ ರಾಮನಿಗೆ ಸಹಾಯ ಮಾಡುವನು, ಹನುಮಂತನ ಪ್ರಸ್ತಾಪವೇ ಇಲ್ಲದಿರವುದು ಈ ಕಥೆಯ ಇನ್ನೊಂದು ವಿಶೇಷ. ದಶಗ್ರೀವನ ಶಕ್ತಿ ಅವನ ಬಲಗಾಲ ಹೆಬ್ಬೆಟ್ಟಿನಲ್ಲಿದ್ದು ಯುದ್ಧದಲ್ಲಿ ಅವನು ಸಾಯದೇ ಉಳಿಯುವನು.

ಪೂರ್ವ ಇರಾನಿನ ಈ ರಾಮಾಯಣದ ಕಥೆ ಬೌದ್ಧಧರ್ಮದ ಹಿನ್ನಲೆಯಲ್ಲಿ ರೂಪುಗೊಂಡಿದೆ, ಆರಂಭದಲ್ಲೂ, ಸಮಾಪ್ತಿಯಲ್ಲೂ ಬೌದ್ಧ ಧರ್ಮದ ಹೆಗ್ಗಳಿಕೆಯ ಉಲ್ಲೇಖವಿದೆ.

ಈ ಕಥೆಯಲ್ಲಿ ಜರುಗುವ ಪ್ರಸಂಗಗಳು ಸರಳವಾಗಿದ್ದು ನಿರೂಪಣೆಯಲ್ಲಿ ಅಲಂಕರಣದ ಆವೇಶವಿದೆ. ಕಥೆಯು ವಾಲ್ಮೀಕಿ ರಾಮಾಯಣದಿಂದ ಎಷ್ಟು ಪ್ರಭಾವಿತವಾಗಿದೆಯೆಂದು ಹೇಳಲು ಸಾಧ್ಯವಿಲ್ಲದಿದ್ದರೂ ವಾಲ್ಮೀಕಿ ಕಾವ್ಯಕ್ಕಿಂತ ಪ್ರಾಚೀನ ಜನಪದ ಸಂಪ್ರದಾಯವನ್ನು ಅವಲಂಬಿಸಿದೆ ಎನ್ನಬಹುದು. ( – ಆಧಾರ )

---

(5 ನೇ ಪುಟದಿಂದ )

ವೆಂಬ ವಿಶೇಷ ಭಕ್ಷ್ಯವನ್ನು ತಯಾರಿಸುತ್ತಾರೆ. ಗಣಪತಿಯ ಸುತ್ತಲೂ ಕಬ್ಬಿನ ಜಲ್ಲೆಗಳಿಂದ ಆವರಣವನ್ನು ರಚಿಸಿ ಈ ಅಪ್ಪವನ್ನು ಗಣಪತಿಯ ಮುಖಕ್ಕೆ ಸರಿಯಾಗಿ ತುಂಬಿಸುತ್ತಾರೆ ಮೂಡು + ಅಪ್ಪ ( ಅಪ್ಪದಿಂದ ಮುಚ್ಚು ) ಎಂಬುದೇ ಮುಂದ ಮೂಡಪ್ಪ ಎಂದಾಯಿತು. ಈ ಮೂಡಪ್ಪ ಸೇವೆ 165 ವರ್ಷಗಳಿಗೊಮ್ಮೆ ನಡೆಯುವ ಸೇವೆ. ತುಳುನಾಡ ಕವಿ ಪಾರ್ತಿಸುಬ್ಬನ ಪ್ರಕಾರ 1797 ರಲ್ಲಿ ಮೂಡಪ್ಪ ಸೇವೆ ನಡೆದಿತ್ತಂತೆ. ನಂತರ 165 ವರ್ಷಗಳ ವರೆಗೆ ಅಂತಹ ಸೇವೆ ನಡೆದ ಆಧಾರಗಳಿಲ್ಲ. ಇತ್ತೀಚೆಗೆ ಅಂದರೆ 1962 ರಲ್ಲಿ ( 165 ವರ್ಷಗಳ ನಂತರ ) ಮೂಡಪ್ಪ ಸೇವೆ ನಡೆದಿದೆ. ಇದು ಈ ನಾಡಿನ ಒಂದು ವೈಶಿಷ್ಟ್ಯಪೂರ್ಣವಾದ ಸೇವೆ. ನಮ್ಮ ನಾಡಿನಲ್ಲಿ ಎಷ್ಟೋ ಮಹಾ ಗಣಪತಿ ಕ್ಷೇತ್ರಗಳಿದ್ದರೂ ಈ ರೀತಿಯ ಅಪೂರ್ವ ಸೇವೆ ನಡೆಯುವ ಕ್ಷೇತ್ರ ಇನ್ನೊಂದಿಲ್ಲ.

ಈ ಮಧೂರ ಕ್ಷೇತ್ರವು ಕಾಸರಗೋಡು ಪಟ್ಟಣದ ಈಶಾನ್ಯ ಭಾಗದಲ್ಲಿ ಸುಮಾರು 7 ಕಿ.ಮೀ ದೂರದಲ್ಲಿ ಮಧುವಾಹಿನೀ ನದಿಯಿಂದ ಸುತ್ತುವರಿದು ಸಹಸ್ರಾರು ಭಕ್ತರನ್ನು ಕೈಬೀಸಿ ಕರೆಯುತ್ತಿದೆ.

---

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮತಿ ತಿರುಪತಿ ದೇವಸ್ಥಾನಗಳ ಕಲ್ಯಾಣ ಮಂಟಪಗಳನ್ನು ಇನ್ನು ಮುಂದೆ ಧಾರ್ಮಿಕ ವಿವಾಹ ಕಾರ್ಯಕ್ರಮಗಳಿಗೇ ಅಲ್ಲದೆ ಪ್ರವೇಶ ರುಸುಮಿಲ್ಲದೆ ನಡೆಸುವ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ 1/3 ಭಾಗದ ಬಾಡಿಗೆಗೆ ನೀಡಲು ತೀರ್ಮಾನಿಸಲಾಯಿತು. ಟಿಕೆಟ್ ಸಹಿತವಾದ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪೂರ್ತಿ ಬಾಡಿಗೆ ವಸೂಲು ಮಾಡಬೇಕೆಂದೂ ತೀರ್ಮಾನಿಸಲಾಯಿತು.

* * * *

ನೈವೇಲಿಯ ತೆಲುಗು ಸಮಿತಿ ಸಾರಥ್ಯದಲ್ಲಿ ಸ್ಥಳೀಯರ ಸಹಕಾರದಿಂದ ಅಲ್ಲಿ ತಿ. ತಿ. ದೇ. ಸಮಾಚಾರಕೇಂದ್ರವನ್ನು ಆರಂಭಿಸಲು ತೀರ್ಮಾನಿಸಲಾಯಿತು. ಇದೇ ರೀತಿ ನಾಂದೇಡ್‌ನಲ್ಲಿ ನಿರ್ವಹಣೆಯ ವೆಚ್ಚವನ್ನು ಅಲ್ಲಿನವರೇ ಭರಿಸುವಂತೆ ಇದ್ದಲ್ಲಿ ಅಲ್ಲಿಯೂ ಒಂದು ತಿ. ತಿ. ದೇ. ಸಮಾಚಾರ ಕೇಂದ್ರವನ್ನು ತೆರೆಯಲು ತೀರ್ಮಾನಿಸಲಾಯಿತು.

* * * *

ಪೂರ್ವಗೋದಾವರಿ ಜಿಲ್ಲೆಯ ಕಪಿಲೇಶ್ವರಪುರದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣ ಮಾಡಲು ತೀರ್ಮಾನಿಸಲಾಯಿತು.

* * * *

ಕೇಸರಗುಟ್ಟದಲ್ಲಿ ತಿ. ತಿ. ದೇ. ಧರ್ಮಶಾಲೆಯನ್ನು ನಿರ್ಮಿಸಲು ಅಂಗೀಕರಿಸಲಾಯಿತು. ಈ ಧರ್ಮಶಾಲೆಯ ಮೊದಲಂತಸ್ತಿನ ಹತ್ತು ಕೋಣೆಗಳ ನಿರ್ಮಾಣ ವೆಚ್ಚ 4.5 ಲಕ್ಷರೂಗಳನ್ನೂ ಎರಡನೆ ಅಂತಸ್ತಿನ ಹತ್ತು ಕೋಣೆಗಳ ನಿರ್ಮಾಣ ವೆಚ್ಚ 3.6 ಲಕ್ಷರೂಗಳನ್ನು ಮೀರಬಾರದೆಂದೂ ತೀರ್ಮಾನಿಸಲಾಯಿತು.

* * * *

ಕೇಸರಗುಟ್ಟದಲ್ಲಿ ರೂ 2 ಲಕ್ಷದ ವೆಚ್ಚದಲ್ಲಿ ತಿ.ತಿ. ದೇ. ಹೆಸರಿನಲ್ಲಿ ಒಂದು ಪ್ರಾರ್ಥನಾಮಂದಿರವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಪೋತನ ಪಂಚಶತಿ ಜಯಂತ್ಯುತ್ಸವ ಸಂದರ್ಭದಲ್ಲಿ ಕವಿಪೋತನನ ನಿವಾಸಸ್ಥಳವೆಂದು ತಿಳಿಯಲ್ಪಟ್ಟಿರುವ ಕಡಪ ಜಿಲ್ಲೆಯ ಒಂಟಿಮಿಟ್ಟ ಅಗ್ರಹಾರದಲ್ಲಿ ಪ್ರತಿಷ್ಠಾಪಿಸಲು ಐದು ಅಡಿ ಎತ್ತರದ ಪೋತನನ ಶಿಲಾವಿಗ್ರಹವನ್ನು ಕಡಪಜಿಲ್ಲೆಯ ಕಲೆಕ್ಟರ್ ಅವರಿಗೆ ಒಹೂಕರಿಸಲು ತೀರ್ಮಾನಿಸಲಾಯಿತು.

* * * *

ಚಿತ್ತೂರು ಜಿಲ್ಲೆಯಲ್ಲಿ ಅರ್ಧಕ್ಕೆ ನಿಲ್ಲಿಸಲ್ಪಟ್ಟಿರುವ ಶ್ರೀ ವೆಂಕಟೇಶ್ವರ ಕಲಾಕೇಂದ್ರ ಭವನದ ನಿರ್ಮಾಣವನ್ನು ಪೂರ್ತಿಗೊಳಿಸಿ ಅದನ್ನು ಶ್ರೀ ವೆಂಕಟೇಶ್ವರ ಕಲಾಕೇಂದ್ರ ಹಾಗೂ ಕಲ್ಯಾಣ ಮಂಟಪವನ್ನಾಗಿ ಪರಿವರ್ತಿಸಲು ತೀರ್ಮಾನಿಸಲಾಯಿತು. ಸ್ಥಳೀಯ ಕೇಂದ್ರದ ಸಮಿತಿಯವರು ಕೇಂದ್ರದ ಭೂಮಿ, ಹಾಗೂ ಭವನಗಳ ಸರ್ವ ಹಕ್ಕುಗಳನ್ನೂ ತಿ. ತಿ. ದೇ. ಗಳಿಗೆ ನೀಡಿದಾಗಲೇ ಈ ಕಾರ್ಯಕ್ರಮ ಜಾರಿಗೆ ಬರುವುದು.

* * * *

ತಿರುಪತಿಯ ಶ್ರೀವೆಂಕಟೇಶ್ವರ ನಾಟ್ಯ ಕಲಾ ಪರಿಷತ್‌ನ 28ನೇ ವಾರ್ಷಿಕ ನಾಟ್ಯೋತ್ಸವಗಳ ಸಂದರ್ಭದಲ್ಲಿ ಪೌರಾಣಿಕ, ಸಾಂಸ್ಕೃತಿಕ, ಚಾರಿತ್ರಿಕ ನಾಟಕ ಪ್ರದರ್ಶನಗಳಿಗಾಗಿ ಆ ಸಂಸ್ಥೆಗೆ ರೂ 20,000 ವನ್ನು ಮಂಜೂರು ಮಾಡಲಾಯಿತು.

* * * *

ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಅಧಿಕಾರಿಗಳು ತಕ್ಕಷ್ಟು ಸ್ಥಳ ನೀಡುವಂತಿದ್ದಲ್ಲಿ ಐದುನೂರು ಮಂದಿಗೆ ಸಾಕಾಗುವಷ್ಟು ದೊಡ್ಡ ಪ್ರಾರ್ಥನಾ ಮಂದಿರವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಆದಿಲಾಬಾದ್ ಜಿಲ್ಲೆಯ ನಿರ್ಮಲ್‌ನಲ್ಲಿ ಶ್ರೀ ವೆಂಕಟೇಶ್ವರ ಕಲ್ಯಾಣ ಮಂಟಪ ನಿರ್ಮಾಣಕ್ಕಾಗಿ ಬಂದ ಅಭ್ಯರ್ಥನೆಯನ್ನು ಪರಿಶೀಲಿಸಲು ನಿಬಂಧನೆಗಳ ಪ್ರಕಾರ ದೇವಸ್ಥಾನಗಳಿಗೆ ಸಲ್ಲಿಸಬೇಕಾದ ಸ್ಥಳೀಯ ವಂತಿಗೆಯನ್ನು ಕಳುಹಿಸಬೇಕೆಂದು ಕೇಳಲು ತೀರ್ಮಾನಿಸಲಾಯಿತು.

* * * *

ಕಲ್ಯಾಣೋತ್ಸವ ಮೊದಲಾದ ಆರ್ಜಿತ ಸೇವೆಗಳನ್ನು ದೀರ್ಘಕಾಲಿಕ ಪ್ರಾತಿಪದದಲ್ಲಿ ನಡೆಸಲು ಬಯಸುವ ಗೃಹಸ್ಥರಿಂದ ಮೂಲಧನವನ್ನು ಸ್ವೀಕರಿಸುವ ಸಮಯದಲ್ಲಿ, ಆಯಾ ಆರ್ಜಿತಸೇವೆಗಳ ಶುಲ್ಕ ಹೆಚ್ಚಿದಾಗಲೆಲ್ಲ ಗೃಹಸ್ಥರಿಂದ ಅವರ ಮೂಲಧನಕ್ಕೆ ಹೆಚ್ಚುವರಿ ಶುಲ್ಕ ಮೂಲವನ್ನು ಸ್ವೀಕರಿಸಬೇಕು ಎಂದು ತೀರ್ಮಾನಿಸಲಾಯಿತು.

* * * *

ಶ್ರೀಶೈಲಂ ಜಲವಿದ್ಯುದುತ್ಪಾದನಾ ಯೋಜನೆಯ ಫಲವಾಗಿ ಮುಳುಗಡೆ ಹೊಂದುತ್ತಿರುವ ದೇವಾಲಯಗಳ ಪುನಃ ಪ್ರತಿಷ್ಠಾಪನದಲ್ಲಿ ಅಗತ್ಯವಾದ ಧ್ವಜಸ್ತಂಭಗಳಿಗಾಗಿ ಬೇಕಾದ ಮರವನ್ನು ರೂ 1.5 ಲಕ್ಷರೂಗಳ ವೆಚ್ಚದಲ್ಲಿ ಕರ್ನಾಟಕ ರಾಜ್ಯದಿಂದ ಕೊಂಡುಕೊಂಡು ಆಯಾ ದೇವಾಲಯಗಳಿಗೆ ನೀಡಲು ತೀರ್ಮಾನಿಸಲಾಯಿತು.

* * * *

ಶ್ರೀಕಾಕುಲಂ ಜಿಲ್ಲೆಯ ಪಾಲಕೊಂಡದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ತಿರ್ಮಾನಿಸಲಾಯಿತು.

* * * *

ಹೈದರಾಬಾದಿನ ಸಂಜೀವ ನಗರದ ಶ್ರೀರಾಮಾಂಜನೇಯ, ಅಲಮೇಲುಮಂಗಾಸಮೇತ ವೆಂಕಟೇಶ್ವರಸ್ವಾಮಿ ದೇವಸ್ಥಾನಕ್ಕೆ 5' 4½" ಎತ್ತರದ ಶ್ರೀ ವೆಂಕಟೇಶ್ವರಸ್ವಾಮಿ ವಿಗ್ರಹವನ್ನು ಉಚಿತವಾಗಿ ನೀಡಲು ಅಂಗೀಕರಿಸಲಾಯಿತು.

* * * *

ತಿರುಪತಿ ಹಾಗೂ ತಿರುಮಲೆಗಳಲ್ಲಿ ರಾತ್ರಿ 8 ಗಂಟೆಯಿಂದ ಬೆಳಗ್ಗೆ 8 ರವರೆಗೆ ಕೆಲಸಮಾಡುವ ತಿ. ತಿ. ದೇ. 4ನೇ ದರ್ಜೆ ಸಿಬ್ಬಂದಿಗೆ 0–75 ಪೈಸೆಯ ಅಲ್ಪಾಹಾರ ಭತ್ಯವನ್ನು ಮಂಜೂರು ಮಾಡಲಾಯಿತು.

* * * *

ತಿರುಪತಿ ಪಟ್ಟಣಾಭಿವೃದ್ಧಿ ಸಂಸ್ಥೆಯವರು ಚಿತ್ತೂರು ರಸ್ತೆಯಿಂದ ಅಲಿಪಿರಿಯವರೆಗೆ ನಿರ್ಮಿಸಲಿರುವ ರಿಂಗ್ ರೋಡ್‌ಗೆ ಬೇಕಾದ ದೇವಸ್ಥಾನಗಳ ಭೂಮಿಯನ್ನು ಉಚಿತವಾಗಿ ನೀಡಲು ಅಂಗೀಕರಿಸಲಾಯಿತು.

* * * *

ತಿರುಮಲೆಯ ಕಲ್ಯಾಣ ಕಟ್ಟೆ ಮಿರಾಸಿದಾರರು ತಮ್ಮ ಉಭಯಗಳಲ್ಲಿ ಉಪಯೋಗಿಸುವ ಎರಡು ರಥೋತ್ಸವ ಶ್ವೇತಚ್ಛತ್ರಗಳನ್ನು ದೇವಸ್ಥಾನಗಳ ಆಸ್ತಿಯಾಗಿ ಸ್ವೀಕರಿಸಿ, ಅವುಗಳಿಗೆ ಬಂಗಾರದ ಗುಂಡುಗಳ ಅಲಂಕರಣ ಮಾಡಿ, ರಥೋತ್ಸವದಲ್ಲಿ ಉಪಯೋಗಿಸಲು ತೀರ್ಮಾನಿಸಲಾಯಿತು.

* * * *

ನಮ್ಮ ದೇಶದ ಪ್ರಮುಖ ದೇವಾಲಯಗಳು, ಪುಣ್ಯಕ್ಷೇತ್ರಗಳು ಅವುಗಳ ಯಾತ್ರಾಮಾರ್ಗವನ್ನು ತಿಳಿಸುವ ಚಿತ್ರಪಟಗಳನ್ನು ತಿ. ತಿ. ದೇ. ಪ್ರಕಟಿಸುವುದಾಗಿಯೂ, ಅದಕ್ಕೆ ಬೇಕಾದ ಸಮಾಚಾರಗಳನ್ನು ನೀಡಬೇಕೆಂದು ದೇವಾದಾಯ ಕಮೀಷನರ್ ಅವರನ್ನು ಕೇಳಲು ನಿರ್ಣಯಿಸಲಾಯಿತು.

( ವಾರ್ತಾಲಹರಿ : ಮುಂದುವರೆದದ್ದು )

## ಸಿಲೋನಿನಲ್ಲಿ ವಿಶ್ವಹಿಂದೂ ಸಮ್ಮೇಳನ

ಸಿಂಹಳದಲ್ಲಿ ಕಳೆದ ಏಪ್ರಿಲ್‌ನಲ್ಲಿ 8 ದಿನಗಳ ವಿಶ್ವಹಿಂದೂ ಸಮ್ಮೇಳನ ಯಶಸ್ವಿಯಾಗಿ ನಡೆಯಿತೆಂದು ವರದಿಯಾಗಿದೆ. ಕೆನ್ಯ, ಯುಗೋಸ್ಲಾವಿಯಾ, ಪಶ್ಚಿಮಜರ್ಮನಿ, ಸಿಂಗಪೂರ್, ಕೊಲಂಬಿಯ ಭಾರತ ದೇಶದ ಪ್ರತಿನಿಧಿಗಳಿಂದ ಕೂಡಿದ ಈ ಸಮ್ಮೇಳನವನ್ನು ಸಿಂಹಳದ ಅಧ್ಯಕ್ಷ ಶ್ರೀ ಜೆ. ಆರ್. ಜಯವರ್ಧನೆ ಅವರು ಉದ್ಘಾಟಿಸಿದರು.

"ಪ್ರತಿಪ್ರೇಕ್ಷಕ ಶ್ರೋತೃವಿಗೂ ಪ್ರತ್ಯೇಕ ಮೇಜು, ಕುರ್ಚಿ, ಯಾವುದೇ ಭಾಷೆಯ ಪತ್ರಿಗೆಯ ವಾಚನವಾಗುತ್ತಿದ್ದರೂ ಅದರ ಆಂಗ್ಲಾನುವಾದ, ತಮಿಳು ಭಾಷಾಂತರದ ನೇರಪ್ರಸಾರದ ಸೌಲಭ್ಯ, ಹಾಗಾಗಿ ಸಮ್ಮೇಳದನ ಯಾವ ಕಲಾಪವನ್ನೂ ಲಘುವಾಗಿ ತೆಗೆದುಕೊಳ್ಳಲವಕಾಶವಿರದಂತೆ ಈ ಸಮ್ಮೇಳನದ ಉದ್ದೇಶ ಯೋಜನೆಗಳನ್ನು ಸಾರ್ಥಕ ರೀತಿಯಲ್ಲಿ ತಿಳಿವ ಕುತೂಹಲ, ಶ್ರದ್ಧೆ ಆಸಕ್ತಿಗಳು ಅಲ್ಲಿ ಬಂದಿದ್ದ ಪ್ರತಿ ವ್ಯಕ್ತಿ ಪ್ರತಿನಿಧಿಗೂ ಉಂಟಾದುದು ಅಚ್ಚರಿ ಅಲ್ಲ.

ಅನೇಕ ವಿಶ್ವವಿದ್ಯಾನಿಲಯಗಳಿಂದ ಧರ್ಮ, ದರ್ಶನ, ತತ್ವಶಾಸ್ತ್ರ, ವಿಜ್ಞಾನ, ಸಮಾಜಶಾಸ್ತ್ರ ವಿಭಾಗಗಳ ಪ್ರಧಾನ ಆಚಾರ್ಯರುಗಳು, ಸಂಶೋಧನಾಶೀಲ ವಿದ್ಯಾರ್ಥಿ ಅಧ್ಯಾಪಕರುಗಳೂ ಆಯ್ದ ವಿಷಯಗಳ ಕುರಿತು ವಿಶೇಷ ಅಧ್ಯಯನ ಮಾಡಿ ಧರ್ಮ, ಸಂಸ್ಕೃತಿ, ದೈವಶ್ರದ್ಧೆ, ಆಸ್ತಿಕತೆ, ವಿಜ್ಞಾನ ನಾಗರಿಕತೆಗಳ ಪ್ರಗತಿ, ಪರಸ್ಪರ ತುಲನಾತ್ಮಕ ದೃಷ್ಟಿ, ವಿಮರ್ಶೆಗಳನ್ನು ಮಾಡಿ ವಿವೇಚನಾ ಪೂರ್ವಕವಾಗಿ ತಮ್ಮ ತಮ್ಮ ಭಾಷೆಗಳಲ್ಲೇ ಪತ್ರಿಕೆಗಳನ್ನೂ ಮಂಡಿಸಿದರು. ಆ ಐದೂ ದಿನಗಳ ವಿಚಾರವೇದಿಕೆಗಳು ಪಾಂಡಿತ್ಯಪೂರ್ಣ ಜಿಜ್ಞಾಸಾಪೂರ್ಣವಾಗಿ ನಡೆದವು. ಯಾವುದೇ ವಿಷಯದ ಬಗ್ಗೆ ಶ್ರೋತೃಗಳು ತಮ್ಮ ಪ್ರಶ್ನೆಗಳನ್ನು ಮುಂದಿಟ್ಟು ಉತ್ತರ ಪಡೆಯುವ ಸೌಕರ್ಯವಿದ್ದಿತು. ಯಾವ ಭಾಷೆಯ ಉಪನ್ಯಾಸವಾದರೂ ಇಂಗ್ಲೀಷ್, ತಮಿಳು, ಸಿಂಹಳೀ ಭಾಷೆಗಳಿಗೆ ತರ್ಜುಮೆಗೊಂಡೇ ಶ್ರವಣ ಮನನವಾಗುವಂತಿದ್ದುದು ವಿಶಿಷ್ಟ."

ಸಿಲೋನಿನ ಹಿಂದೂ ಧರ್ಮ, ಸಂಸ್ಕೃತಿ ಇಲಾಖಾಮಂತ್ರಿ ಶ್ರೀ ರಾಜದೊರೈ ಅವರ ಪರ್ಯವೇಕ್ಷಣದಲ್ಲಿ ನಡೆದ ಈ ವಿಶ್ವಹಿಂದೂ ಸಮ್ಮೇಳನದ ಕಡೆಯ ಮೂರು ದಿನಗಳಲ್ಲಿ ಸಿಂಹಳದ ವಿವಿಧ ಐತಿಹಾಸಿಕ ಧಾರ್ಮಿಕ ಕ್ಷೇತ್ರಗಳ ಪರಿಚಯವನ್ನು ಪ್ರತಿನಿಧಿಗಳಿಗೆ ಮಾಡಿಕೊಡಲಾಯಿತು. (ಆಧಾರ : ಧರ್ಮಶ್ರೀ)

* * * *

## ಹಿಂದೂ ಧರ್ಮ ರಕ್ಷಣ ಸಂಸ್ಥೆ ಬೆಂಗಳೂರು

ಎಂದಿನಂತೆ ಆಗಸ್ಟ್ 1982 ರಲ್ಲಿ ಹಿಂದೂ ಧರ್ಮರಕ್ಷಣ ಸಂಸ್ಥೆಯ ಬೆಂಗಳೂರಿನ ಶಾಖೆಯು ಹಲವಾರು ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಕಾರ್ಯವನ್ನು ನಿರ್ವಹಿಸಿತು.

7–8–82 ರಂದು ವೈಯ್ಯಾಳಿಕಾವಲಿನ ಸಂಸ್ಥೆಯ ಸಭಾಮಂದಿರದಲ್ಲಿ ಶ್ರೀ ಎಂ. ಮೋಹನ್ ಅವರಿಂದ ಭಕ್ತಿಗೀತೆಗಳ ಕಾರ್ಯಕ್ರಮ ನಡೆಯಿತು.

ಬೆಂಗಳೂರಿನ ಶ್ರೀ ಭೂಮಾನಂದ ಸರಸ್ವತಿ ಸ್ವಾಮಿಗಳು 8–8–82 ರಿಂದ 10–8–82 ವರೆಗೆ ಮೂರುದಿನಗಳ ಕಾಲ ಭಗವದ್ಗೀತೆಯ ಆರನೇ ಅಧ್ಯಾಯದ ಬಗ್ಗೆ ಉಪನ್ಯಾಸ ನೀಡಿದರು.

14–8–82 ರಂದು ಕುಮಾರಿ ಸಿ.ಕೆ. ಉಮಾ ಅವರಿಂದ ಶ್ರೀನಿವಾಸಕಲ್ಯಾಣ ಹರಿಕಥೆ ನಡೆಯಿತು.

15–8–82 ರಂದು ವಿಜಯಶ್ರೀ ಭಜನ ಮಂಡಳಿಯವರಿಂದ ವಿಷ್ಣು ಸಹಸ್ರನಾಮ ಪ್ರವಚನ ನಡೆಯಿತು.

21–8–82 ರಂದು ಸಂಜೆ ಕುಮಾರಿ ಜಿ.ಎಸ್. ಉಮಾ ಅವರಿಂದ ವೀಣಾವಾದನ ಗೋಷ್ಠಿ ನಡೆಯಿತು.

28–8–82 ರಂದು ಸಂಜೆ ಕುಮಾರಿ ಎಂ. ಎಸ್. ಗೀತಾ ಹಾಗೂ ಕುಮಾರಿ ಲಲಿತ ಅವರಿಂದ ಭಕ್ತಿಗೀತೆಗಳ ಕಾರ್ಯಕ್ರಮ ನಡೆಯಿತು.

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಶಾಖಾ ಮ್ಯಾನೇಜರ್ ಶ್ರೀ ಅಧ್ಯಾಪಕ ಅವರ ಮೇಲುವಿಚಾರಣೆಯಲ್ಲಿ ನಡೆದ ಎಲ್ಲ ಕಾರ್ಯಕ್ರಮಗಳೂ ಯಶಸ್ವಿಯಾಗಿ ಹೆಚ್ಚಿನ ಜನರನ್ನು ಆಕರ್ಷಿಸಿತೆನ್ನಬಹುದು.

## ಏಕನಾಥಜೀ ರಾನಡೆ ನಿಧನ

ಜಗದ್ವಿಖ್ಯಾತ ಕನ್ಯಾಕುಮಾರಿಯ ವಿವೇಕಾನಂದ ಶಿಲಾಸ್ಮಾರಕದ ನಿರ್ಮಾಣದ ಹಿಂದಿನ ಸ್ಫೂರ್ತಿಯ ಸೆಲೆ, ಅದರ ಸಂರಕ್ಷಣೆಯ, ಅಭಿವೃದ್ಧಿಯ ನೇತಾರ ಶ್ರೀ ಏಕನಾಥಜೀ ರಾನಡೆಯವರು ಗಣೇಶ ಚತುರ್ಥಿಯ ದಿನ (22–8–82) ತಮ್ಮ 68 ನೇಯ ವಯಸ್ಸಿನಲ್ಲಿ ನಿಧನರಾದರು.

ವಿದರ್ಭದ ಅಮರಾವತಿ ಜಿಲ್ಲೆಯ ತಿಮತಲದಲ್ಲಿ 19–11–1914 ರಲ್ಲಿ ಹುಟ್ಟಿದ ರಾನಡೆಯವರು ಎಂ.ಎ; ಎಲ್.ಎಲ್.ಬಿ. ಪದವಿಗಳನ್ನು ಪಡೆದು ದೇಶಸೇವೆಗೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರು. ಹಿಂದೂ ಧರ್ಮದ ಮಹಾನ್ ಪ್ರಚಾರಕ, ಸಂರಕ್ಷಕರಾಗಿ, ದುಡಿಯುತ್ತ ಈಶಾನ್ಯ ಭಾರತದಲ್ಲಿ ಹೈಂದವ ಸಂಸ್ಕೃತಿ, ಪರಂಪರೆಗಳನ್ನು ಹರಡಲು ಹಗಲಿರುಳು ಶ್ರಮಿಸಿ ಬಹುಮಟ್ಟಿಗೆ ಯಶಸ್ವಿಯೂ ಆದರು.

ಸ್ವಾಮಿ ವಿವೇಕಾನಂದರ ಜನ್ಮ ಶತಾಬ್ದಿಯ ಸಂದರ್ಭದಲ್ಲಿ (1963) ಸ್ವಾಮೀಜೀಯವರಿಗೆ ಸೂಕ್ತ ಸ್ಮಾರಕ ನಿರ್ಮಿಸಲು ಗೆಳೆಯರಿಂದ ಹಿರಿಯರಿಂದ ಆದೇಶಿತರಾಗಿ, ಕನ್ಯಾಕುಮಾರಿಯ ಲೋಕ ವಿಖ್ಯಾತ ವಿವೇಕಾನಂದ ಶಿಲಾಸ್ಮಾರಕ ನಿರ್ಮಾಣಕ್ಕೆ ತೊಡಗಿದರು. ಅದು 1970 ರಲ್ಲಿ ಪೂರ್ಣವಾಯಿತು. 1972 ರಲ್ಲಿ ಸ್ಥಾಪಿಸಲಾದ ವಿವೇಕಾನಂದ ಕೇಂದ್ರ ಸಂಸ್ಥೆಯ ಮೂಲಕ ಹೈಂದವ ಧರ್ಮಪ್ರಸಾರಕ್ಕಾಗಿ ಸೇವಾವ್ರತಿಗಳ ತಂಡಗಳನ್ನು ನಿರ್ಮಾಣಗೊಳಿಸಿದರು.

ಉತ್ತಮ ವಾಗ್ಮಿಗಳಾದ ರಾನಡೆಯವರು ಹಲವು ಸಂಕಲನಗಳನ್ನು ಹೊರತಂದಿದ್ದು ವಿವೇಕಾನಂದ ಕೇಂದ್ರದ ಹಲವು ಪ್ರಕಟನೆಗಳ ಹಿಂದಿನ ಪ್ರೇರಕಶಕ್ತಿಯಾಗಿದ್ದರು. ಆಂಗ್ಲಮಾಸಿಕ 'ಯುವಭಾರತಿ', ತ್ರೈಮಾಸಿಕ 'ಬ್ರಹ್ಮವಾದಿ' ಹಾಗೂ ಷಣ್ಮಾಸಿಕ 'ವಿವೇಕಾನಂದ ಕೇಂದ್ರಪತ್ರಿಕೆ'ಗಳ ಪ್ರಧಾನಸಂಪಾದಕರಾಗಿದ್ದರು. ಅವರನ್ನು ಕಳೆದುಕೊಂಡ ಭಾರತದಲ್ಲಿ ಹೈಂದವ ಧರ್ಮದ ಆಧುನಿಕ ದ್ರಷ್ಟಾರರೊಬ್ಬರ ಕೊರತೆಯುಂಟಾಗಿದೆ ಎನ್ನಬಹುದು.

# ಫುಟ್ ಬಾಲ್ ಪಂದ್ಯಾವಳಿ



ತಿ. ತಿ. ದೇ. ಗಳ ಉದ್ಯೋಗಿ ಸಂಕ್ಷೇಮ ವಿಭಾಗದವರು ಆಗಸ್ಟ್ ತಿಂಗಳಿನಲ್ಲಿ ಫುಟ್‌ಬಾಲ್ ಪಂದ್ಯಾವಳಿಯನ್ನು ಏರ್ಪಡಿಸಿದ್ದರು. 25-8-82 ರಂದು ತಿ. ತಿ. ದೇ. ಇಲೆವೆನ್ ಹಾಗೂ ಮದರಾಸಿನ ಎವರ್‌ಗ್ರೀನ್ ಫುಟ್‌ಬಾಲ್ ಕ್ಲಬ್‌ಗಳ ನಡುವಣ ಪಂದ್ಯದಿಂದ ಉದ್ಘಾಟನೆ ಹೊಂದಿದ ಈ ಪಂದ್ಯಾವಳಿ 29-8-82 ರಂದು ನಡೆದ ಗುಂಟೂರು ಇಲೆವೆನ್ ಹಾಗೂ ಆರೋಗ್ಯವರಂ ಇಲೆವೆನ್‌ಗಳ ಪಂದ್ಯದಿಂದ ಮುಕ್ತಾಯವಾಯಿತು.

ಪಂದ್ಯಾವಳಿಯಲ್ಲಿ ಗೆದ್ದ ಸುಧಾಕರ್ ಕಪ್ತಾನರಾದ ಗುಂಟೂರು ಇಲೆವೆನ್‌ಗೆ ವಿನ್ನರ್ಸ್ ಕಪ್ ಹಾಗೂ ಆಟಗಾರರಿಗೆ ಪದಕಗಳನ್ನೂ, ರನ್ನರ್ಸ್ ಟೀಂನ ಆರೋಗ್ಯವರಂ ಇಲೆವೆನ್ ಆಟಗಾರರಿಗೆ ಪದಕಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಯವರು ವಿತರಣೆ ಮಾಡಿದರು.

# ಕೋಲಾರದಲ್ಲಿ ಸಾಮೂಹಿಕ ವಿವಾಹಗಳು.

ಕೋಲಾರದ ಸ್ಥಳೀಯ ವಿಶ್ವ ಹಿಂದೂ ಪರಿಷತ್ತಿನ ವತಿಯಿಂದ ವಿನಾಯಕನ ಹಬ್ಬದ ಅಂಗವಾಗಿ ಪ್ರಪ್ರಥಮ ಬಾರಿಗೆ ಮಾದರಿ ರೀತಿಯಲ್ಲಿ ಸಾಮೂಹಿಕ ಮದುವೆಗಳನ್ನು ಮಾನವೀಯ ಮಾರ್ಗದಲ್ಲಿ ಏರ್ಪಡಿಸಲಾಗಿತ್ತು.

ಜಾತಿ, ಕುಲ, ವರ್ಗ, ಊರುಗಳನ್ನು ಗಣನೆಗೆ ತೆಗೆದುಕೊಳ್ಳದೆ ಐದು ಜೊತೆ ವಧೂವರರ ವಿವರ ಸಹ ತಿಳಿಯದೆ ಮದುವೆಗೆ ಬಂದಿದ್ದವರೆಲ್ಲ ಬಂಧು ವರ್ಗದವರಾಗಿ ಹೋಗಿ ತಮ್ಮ ಹತ್ತಿರದ ಸಂಬಂಧಿಯ ಮದುವೆ ಎಂಬಂತೆ ಸಡಗರದಿಂದ ಮದುವೆ ಮಂಟಪದಲ್ಲಿ ಎಲ್ಲ ಕಾರ್ಯಗಳಿಗೂ ಓಡಾಡಿದ್ದು ಮಾನವೀಯತೆಯ ಪ್ರದರ್ಶನದ ಪರಮಾವಧಿಯಾಗಿತ್ತು. ಅಸಭ್ಯ ಶ್ರೀಮಂತಿಕೆ ಪ್ರದರ್ಶನಗಳಿರಲಿಲ್ಲ.

ಸ್ಥಳೀಯ ಬಿಂದುಮಾಳ್ಯಂ ಕುಟುಂಬದವರು ತಮ್ಮ ಕಲ್ಯಾಣ ಮಂದಿರ ಮತ್ತಿತರ ಎಲ್ಲ ಸಲಕರಣೆಗಳನ್ನು ಈ ಮದುವೆಗಳಿಗೆ ಉಚಿತವಾಗಿ ನೀಡಿದ್ದರು. ಜವಾಹಿರಿ ವರ್ತಕ ಸತ್ಯನಾರಾಯಣ ಶೆಟ್ಟಿಯವರು ಮಾಂಗಲ್ಯಗಳನ್ನು ನೀಡಿದರು.

ತರಕಾರಿ ವರ್ತಕರೊಬ್ಬರು ಸಾವಿರ ಮಂದಿಗೆ ಅಡಿಗೆಗೆ ಅಗತ್ಯವಾದ ತರಕಾರಿ ಕೊಟ್ಟರು. ಇತರ ಅಗತ್ಯ ಧಾನ್ಯಗಳನ್ನು ಮತ್ತಿತರರು ಸರಬರಾಜು ಮಾಡಿದರು.

ಎಲ್ಲ ದಂಪತಿಗಳಿಗೆ ಅಗತ್ಯವಾದ ವಿವಾಹ ವಸ್ತ್ರಗಳನ್ನು ವ್ಯವಸ್ಥಾಪಕರು ಒದಗಿಸಿದರು. ಆಗಮಿಸಿದ್ದ ವಧೂವರರ ಬಳಗದವರು ಮತ್ತು ಆಹ್ವಾನಿತರಿಗೆಲ್ಲ ಸಾಮೂಹಿಕ ಊಟ, ಉಪಚಾರ, ಫಲತಾಂಬೂಲ ಏರ್ಪಾಟಾಗಿತ್ತು.

ವರ ಕೃಷ್ಣಪ್ಪ ಪದವೀಧರ, ಸ್ಥಿತಿವಂತ. ಆದರೂ ಆದರ್ಶಕ್ಕಾಗಿ ವಧು ರಾಜೇಶ್ವರಿಯನ್ನು ಸಾಮೂಹಿಕ ಸಮಾರಂಭದಲ್ಲಿ ಕೈಹಿಡಿದ. ಕೋಲಾರ ತಾಲ್ಲೂಕಿನ ದಾಸಪ್ಪ ಮತ್ತು ಮುನಿವೆಂಕಟಮ್ಮ, ಬಂಗಾರಪೇಟೆ ಬಳಿಯ ಹಿರಣ್ಣಯ್ಯ ಮತ್ತು ತಿಮ್ಮಮ್ಮ, ಮಾಲೂರು ತಾಲ್ಲೂಕಿನ ಕೃಷ್ಣಪ್ಪ ಮತ್ತು ಕೃಷ್ಣಮ್ಮ ಮತ್ತು ಅದೇ ಪ್ರದೇಶದ ಈಶ್ವರಪ್ಪ ಮತ್ತು ರಾಜಮ್ಮನವರು ಈ ಸಮಾರಂಭದಲ್ಲಿ ಬಹು ಅಪರಿಚಿತರ ಸಮ್ಮುಖದಲ್ಲಿ ಒಂದಾದರು. ಈ ಪೈಕಿ ಎರಡು ಜೋಡಿ ಹರಿಜನರದು.

ವಧೂವರ ಹಾಗೂ ಅವರ ಮಾತಾಪಿತರುಗಳು ಮತ್ತು ಹಾಜರಿದ್ದ ಹಲವು ಮಂದಿಯ ಸಹಿಗಳನ್ನು ವಿವಾಹಕ ಪುಸ್ತಕದಲ್ಲಿ ಪಡೆಯಲಾಯಿತು. ಈ ಮಾನವನೀಯ ಮದುವೆಗಳ ಸಂಘಟಕ ಹಾಗೂ ಚೇತನ ನೀಡಿದ ವ್ಯಕ್ತಿ ಜಿ. ಎ. ಸ್. ಪಾರ್ಥಸಾರಥಿಯವರು. (ಕೃಪೆ: ಕನ್ನಡ ಪ್ರಭ)

ಸಾಮೂಹಿಕ ವಿವಾಹಗಳ ಒಂದು ದೃಶ್ಯ.
ಚಿತ್ರ : ಚಂಪಕ್ ರಮೇಶ.



# ನವಂಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 12. | ಶುಕ್ರವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಾರಂಭ |
| 14. | ಭಾನುವಾರ | ನರಕಚತುರ್ದಶಿ |
| 15. | ಸೋಮವಾರ | ಶ್ರೀ ವೆಂಕಟೇಶ್ವರಸ್ವಾಮಿ ದೀಪಾವಳೀ ಆಸ್ಥಾನೋತ್ಸವ |
| 16. | ಮಂಗಳವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಗಜವಾಹನ |
| 17. | ಬುಧವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಗರುಡಸೇವೆ |
| 19. | ಶುಕ್ರವಾರ | ,, ,, ರಥೋತ್ಸವ |
| 20. | ಶನಿವಾರ | ,, ,, ಪಂಚಮೀತೀರ್ಥ |
| 21. | ಭಾನುವಾರ | ಸ್ಕಂದಷಷ್ಠಿ |
| 26. | ಶುಕ್ರವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 27. | ಶನಿವಾರ | ಚಕ್ರತೀರ್ಥ ಮುಕ್ಕೋಟಿ |
| 30. | ಮಂಗಳವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ. |



## ಒಳ ರಕ್ಷಾಪತ್ರ ಚಿತ್ರ ಸೂಚಿ

1. ಶ್ರೀ ಜ್ಞಾನಿ ಜೈಲ್‌ಸಿಂಗರನ್ನು ಸ್ವಾಗತಿಸುತ್ತಿರುವ ತಿ.ತಿ.ದೇ. ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಹಾಗೂ ಆಂಧ್ರಪ್ರದೇಶ ದೇವಾದಾಯ ಇಲಾಖಾ ಮಂತ್ರಿ ಶ್ರೀ ಪಿ ವಿ. ಚೌದುರಿ.
2. ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಯಲ್ಲಿ ಕಾಣಿಕೆಯನ್ನರ್ಪಿಸುತ್ತ, ರಾಷ್ಟ್ರಪತಿ.
3. ಸ್ವಾಮಿಯ ಶೇಷವಸ್ತ್ರವನ್ನು ಹೊದೆದ ರಾಷ್ಟ್ರಪತಿ ಹಾಗೂ ಮತ್ತಿತರರು. ರಾಷ್ಟ್ರಪತಿಯ ಬಲಕ್ಕೆ ಶ್ರೀಮತಿ ಕೌರ್, ಬಲ ಕೊನೆಯಲ್ಲಿ ದೇವಾದಾಯ ಇಲಾಖಾ ಕಮೀಷನರ್ ಶ್ರೀ ಪಿ ಎಸ್. ರಾಜಗೋಪಾಲರಾಜು ಅವರು.
4. ಅಯಿನಾ ಮಹಲಿನಲ್ಲಿ ರಾಷ್ಟ್ರಪತಿ ಹಾಗೂ ಅವರ ಪುತ್ರಿ.
5. ವೇದಾಶೀರ್ವಚನ ಪಡೆಯುತ್ತಿರುವ ರಾಷ್ಟ್ರಪತಿ.
6. ತಿ.ತಿ.ದೇ. ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯರೊಂದಿಗೆ ರಾಷ್ಟ್ರಪತಿ.
7. ಯಾತ್ರಿಕ ಮಾರ್ಗದರ್ಶಿ ಕಿರುಹೊತ್ತಿಗೆ (ಆಂಗ್ಲ) ಯನ್ನು ಬಿಡುಗಡೆಮಾಡುತ್ತ ರಾಷ್ಟ್ರಪತಿ.
8. ತಿ. ತಿ. ದೇ. ಉಪವನದಲ್ಲಿ 'ಕ್ರೋಟನ್ ಜೈಲ್‌ಸಿಂಗ್' ಅನ್ನು ಬಿಡುಗಡೆ ಮಾಡುತ್ತ ರಾಷ್ಟ್ರಪತಿ.
9. ಹಲವು ಪ್ರಮುಖರೊಡನೆ ರಾಷ್ಟ್ರಪತಿ.
10. ದೇವಾಲಯದ ಒಳಗೆ ತೆಗೆದ ಒಂದು ಚಿತ್ರ.
11. ಸುಪ್ರಭಾತ ಸೇವೆಯಲ್ಲಿ ಧ್ಯಾನಮಗ್ನ ರಾಷ್ಟ್ರಪತಿ ಹಾಗೂ ಅವರ ಮಗಳು. ಬಲದಲ್ಲಿ ಶ್ರೀ ಪಿ.ವಿ. ಚೌದುರಿ.

1982ರ ಸೆಪ್ಟೆಂಬರ್ ಸಂಚಿಕೆಯ ಶ್ರೀ ವೆಂಕಟೇಶ್ವರಸ್ವಾಮಿಯವರ ಮುಖಚಿತ್ರ ಎಡಬಲವಾಗಿ ಪ್ರಮಾದವಶಾತ್ ಮುದ್ರಿತವಾಗಿದೆ. ಓದುಗರು ಸಹಾನುಭೂತಿಯಿಂದ ಸ್ವೀಕರಿಸಬೇಕೆಂದು ಕೋರಲಾಗಿದೆ. —ಸಂ॥


Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

Regd No. H/TRP 14 ಬಿಡಿಪ್ರತಿ ಬೆಲೆ ರೂ 1-00

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.
## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.
## ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.
## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

## ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

## ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.